ಸಂಜೀವಿನಿ ಪ್ರಕಾಶನ ೪.

# ಅತಿ ಮಾನವ

( ಕಾದಂಬರಿ )

ಬರೆದವರು:

ಜ. ಲಿ. ಕೆರೂರ, ಬಿ. ಎ.

ಸಂಜೀವಿನಿ ಪ್ರಕಾಶನ ಹುಬ್ಬಳ್ಳಿ.

೧೯೪೭ ]

[ ೨—೦—೦

ಸಂಜೀವಿನಿ ಪ್ರಕಾಶನ ಹುಬ್ಬಳ್ಳಿ.

ಸಂಪಾದಕರು:- ಕೆಲಮದಾನಿ ಗುರುರಾಯರು.

ಸುಮಾರು ೬೦೦ ಪುಟಗಳಲ್ಲಿ ೪ ಗ್ರಂಥಗಳು.

ಚಂದಾ ೫-೧-೦ ಮಾತ್ರ ( ಅಂಚೇ ವೆಚ್ಚ ಸೇರಿ )

ಸಂಜೀವಿನಿ ಪ್ರಕಾಶನದ ಪ್ರಕಟಣೆಗಳು.

೧ ಗ್ರಾಮ ಪಂಚಾನನ ( ಕಾದಂಬರಿ ) ೬-೦-

ಬರೆದವರು:- ಬಾ. ಕೃ. ಲಕ್ಷ್ಮೇಶ್ವರ

೨ ವಿಧಿ ತಂದ ವಧು ( ಕಾದಂಬರಿ ) ೧-೪-

ಬರೆದವರು:- ಪಿ. ವೆಂಕೋಬಾಚಾರ್ಯ

---

ಪ್ರಕಾಶಕರು:
ಕೆಲಮದಾನಿ ಬ್ರದರ್ಸ
ದುರ್ಗದಬೈಲ
ಹುಬ್ಬಳ್ಳಿ.

ಮುದ್ರಕರು:
ಸಿ. ಎನ್. ಬೆಂಡಿಗೇರಿ
ಮುದ್ರಣಾಲಯ
ವಾಗ್ವಿಲಾಸ ಭಾಸ್ಕರ ಪ್ರಿಂಟಿಂಗ ವರ್ಕ್ಸ ಹುಬ್ಬಳ್ಳಿ.

# ಮುನ್ನುಡಿ

ಈ 'ಅತಿ ಮಾನವ' ಆಂಗ್ಲ ಕಾದಂಬರಿಯೊಂದರ ಅನುವಾದ ಮೂಲ ಲೇಖಕರಾದ ಜೊನ ಬರ್ನಾಡರು ದ್ವಿತೀಯ ಜಾಗತಿಕ ಯುದ್ಧದಲ್ಲಿ ಜರ್ಮನಿಯಲ್ಲಿ ಯುದ್ಧ ಕೈದಿಗಳಾಗಿದ್ದ ವಿಜ್ಞಾನಿಗಳು. ಆದ್ದರಿಂದ ಜರ್ಮನಿಯ ವಿಜ್ಞಾನಿ ವರ್ಗದ ಕಾರ್ಯ ಕಲಾಪಗಳಲ್ಲಿ ಇವರಿಗೆ ಪ್ರವೇಶ ದೊರೆಯಿತು. ಜರ್ಮನರು ಈ ಪುಸ್ತಕದಲ್ಲಿ ವಿವರಿಸಿದಂಥ ಅತಿ ಮಾನವ ಕುಲವೊಂದನ್ನು ನಿರ್ಮಿಸಲು ಪ್ರಯತ್ನಿಸಿದರು. ಶತ್ರುಗಳ ಮೇಲೆ ಸೇಡು ತೀರಿಸಿ ಕೊಳ್ಳುವದೇ ಅವರ ಇಂಥ ಪ್ರಯೋಗದ ಹೆಗ್ಗುರಿಯಾಗಿತ್ತು. ಅದಕ್ಕಾಗಿಯೆ ಮಾನವ ಸಹಜವಾದ ದಯಾ ದಾಕ್ಷಿಣ್ಯಗಳಂಥ ಉತ್ತಮ ಗುಣಗಳ ಗಂಧವೇ ಇಲ್ಲದ ಕ್ರೌರ್ಯ ಹಾಗೆ ವೀರತೆಗಳಿಂದ ತುಂಬಿದ ಒಂದು ಅತಿ ಮಾನವ ಕುಲವನ್ನೇ ನಿರ್ಮಿಸ ಬೇಕೆಂದು ಹೆಣಗಿದರು.

ಪುರುಷನ ಸಮಾಗಮವಿಲ್ಲದೆ ಸ್ತ್ರೀಯರಲ್ಲಿ ಮಕ್ಕಳನ್ನು ಪಡೆಯ ಬೇಕೆಂದು ನಡೆಸಿರುವ ಪ್ರಯತ್ನವು ಅತ್ಯಂತ ಆಕರ್ಷಕವಾದುದು. ಆದರೆ ಇದರ ಪರಿಣಾಮವೇನಾದೀತು ಎಂಬುದು ಊಹೆಗೆ ನಿಲುಕದ ವಿಷಯ. ಸದ್ಯಕ್ಕೆ ಅದ್ಭುತ ಅಸಂಭಾವ್ಯವೆಂದು ಪರಿಗಣಿಸಲಾದ ಈ ಸಂಗತಿ ಬರುವ ಶತಮಾನದಲ್ಲಿ ಸ್ವತಃ ಸಿದ್ಧವಾದ ಮಾತಾದೀತು.

ಆದರೆ ಈ ನಮ್ಮ ಕರ್ನಾಟಕದಲ್ಲಿ ಪುರುಷ ಸಂಯೋಗ ವರ್ಜ್ಯವಾದ ಪ್ರಜೋತ್ಪಾದನೆಯ ಮಾತೆತ್ತುವದು ಬಹಿರಂಗವಾಗಿ ಇನ್ನೂ ಗೌಣವಾಗಿರುವಾಗ ಈ ಆಂಗ್ಲ ಕಾದಂಬರಿಯಲ್ಲಿಯ ವಿಷಯ ಇಲ್ಲಿಯೇ ನಡೆದ ಒಂದು ಘಟನೆ ಎಂದು ಆಭಾಸವನ್ನುಂಟು ಮಾಡಲು ಪ್ರಯತ್ನಿಸಿದ್ದರೆ ನಮ್ಮಲ್ಲಿಯ ಕೆಲವರಿಗೆ "ಇದೆಂಥ ಅಶ್ಲೀಲತೆ" ಎಂದು ಹೇಳು ಕಚ್ಚಿದಂತಾಗುತ್ತಿತ್ತು. ಕಾರಣ ಈ ಗ್ರಂಥದ ಮೂಲ ಸ್ವರೂಪವನ್ನು ಮರೆಮಾಚಲು ಪ್ರಯತ್ನಿಸಲಿಲ್ಲ.

ಶ್ರೀ ಕಲಮದಾನಿ ಗುರುರಾಯರು ನನ್ನ ಬೆನ್ನು ಹತ್ತಿ ಈ ಪುಸ್ತಕ ಬರೆಸಿ ತಮ್ಮ ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಿದ್ದಕ್ಕಾಗಿ ನಾನು ಅವರಿಗೆ ಋಣಿಯಾಗಿದ್ದೇನೆ. ಅವರು ನನ್ನ ಬೆನ್ನು ಹತ್ತದಿದ್ದರೆ ನಾನೀ ಪುಸ್ತಕ ಬರೆಯುತ್ತಿದ್ದೆನೊ ಇಲ್ಲವೊ ಹೇಳಲಾರೆ.

ಹುಬ್ಬಳ್ಳಿ
೧—೮—೪೭

ದಲಕೆರೂರ

# ಸಂಪಾದಕನ ಮಾತು

ಸಂಜೀವಿನಿ ಪ್ರಕಾಶನದ ೪ ನೆಯ ಗ್ರಂಥವೆಂದು " ಅತಿ ಮಾನವ " ವನ್ನು ಓದುಗರಿಗೆ ಕೊಡಲು ನನಗೆ ಬಹಳ ಸಂತೋಷವಾಗುತ್ತದೆ. ಇದನ್ನು ಬರೆದ ಶ್ರೀ ದ. ಲ. ಕೆರೂರರು ನನ್ನ ಹಳೆಯ ಗೆಳೆಯರಲ್ಲೊಬ್ಬರು. ಕನ್ನಡದ ವಿಷಯಕ್ಕಿದ್ದ ಇವರ ಆದರ ಪ್ರೀತಿ, ಇವೆಲ್ಲದರಕ್ಕಿಂತಲೂ ಮೋಹ, ಬಹು ಗಾಢವಾದುದು. ಇವರು ಮಾತುಗಾರರಲ್ಲ. ಕೈಲಾದಷ್ಟು ಕೆಲಸ ಮಾಡುವವರು. ಮನಕ್ಕೆ ಬಾರದ ವಿಷಯ ಪ್ರಸ್ತಾಪಿಸಿದರೆ ಸುಮ್ಮನೇ ನಕ್ಕು ಮತ್ತೊಂದು ವಿಷಯ ಎತ್ತುವರು. ಯಾರಾದರೂ ಏನಾದರೂ ಮಾಡಲು ಒತ್ತಾಯಪಡಿಸಿದರೆ " ಆಯಿತು " ಅನ್ನುವರು. ಈ ರೀತಿ ಯಾರಿಗೂ ಕಾಣದವರಾಗಿದ್ದು ಕನ್ನಡನಾಡಿನ ಬಗ್ಗೆ ಸೇವೆಗೈದಿದ್ದಾರೆ. ಸ್ವತಃ ಓದಿಕೊಂಡು ಜ್ಞಾನಾರ್ಜನೆ ಮಾಡಿಕೊಂಡು "ಸಂಯುಕ್ತ ಕರ್ನಾಟಕ" ದಲ್ಲಿದ್ದು ಜೀವನ ಸಾಗಿಸಿದ್ದಾರೆ.

ಅವರೇ ತಮ್ಮ ಮುನ್ನುಡಿಯಲ್ಲಿ ಹೇಳಿದಂತೆ ನಾನು ಒತ್ತಾಯ ಪಡಿಸಿದೆ, ' ಆಯಿತು ' ಅಂದರು. John Bernard ನು ಬರೆದ The New Race of Devils ಎಂಬ ಕಾದಂಬರಿಯನ್ನು ವೇಳೆಗೆ ಸರಿಯಾಗಿ ಭಾಷಾಂತರಿಸಿ ಕೊಟ್ಟರು. ಇವರು ನನಗಾಗಿ ಪಟ್ಟ ಶ್ರಮಕ್ಕೆ ನಾನು ಯಾವಾಗಲೂ ಋಣಿ.

ಕಾದಂಬರಿಯ ಬಗ್ಗೆ ಹೇಳಬೇಕಾದುದು ಅವರು ಹೇಳಿಬಿಟ್ಟಿದ್ದಾರೆ. ಭಾಷಾಂತರ ಹೇಗಾಗಿದೆಂಬುದನ್ನು ಹೇಳುವದು ವಿಮರ್ಶಕರ ಕೆಲಸ.

ಈ ಮೊದಲೇ, ಕೆಲ ದಿನ ಮೊದಲೇ ಈ ಪುಸ್ತಕವನ್ನು ಓದುಗರಿಗೆ ಕೊಡಬೇಕಾಗಿತ್ತು. ಆದರೆ, ಮುದ್ರಣದ ಅನಾನುಕೂಲತೆಗಾಗಿ ಅಚ್ಚಾಗುವದು ಮುಂದೆ ಬಿತ್ತು. ಆದುದರಿಂದ ಓದುಗರು ನನ್ನನ್ನು ಕ್ಷಮಿಸಬೇಕು. ಬಹಳ ಜಾಗ್ರತೆ ವಹಿಸಿ ಈ ಪುಸ್ತಕವನ್ನು ಅಚ್ಚು ಮಾಡಿಕೊಟ್ಟ ಶ್ರೀ. ವಾಗ್ವಿಲಾಸ ಪಾವರ ಪ್ರಿಂಟಿಂಗ್ ವರ್ಕ್ಸ್‌ದ ಒಡೆಯರ ಉಪಕಾರ ಸ್ಮರಿಸುವೆನು.

ಕೆಲಮದಾನಿ ಗುರುರಾಯ

# ಅತಿ ಮಾನವ

## ಮೊದಲ ಮಾತು

(೧೯೧೫)

ತನ್ನ ಕಂದನನ್ನು ಕೊಂದ ಅಪರಾಧಕ್ಕಾಗಿ ಒಬ್ಬ ಮಹಿಳೆಯ ವಿಚಾರಣೆ ನಡೆದಿತ್ತು.

ತನ್ನ ಅಪರಾಧದ ಸತ್ಯಾಸತ್ಯತೆಯನ್ನು ನಿರ್ಣಯಿಸಿ ತನ್ನನ್ನು ಅವಹೇಳನೆಗೆ ಗುರಿಮಾಡಲು ನೆರೆದಿದ್ದ ಜನಸಮೂಹವನ್ನು ಎವೆಯಿಕ್ಕದೆ ನಿರೀಕ್ಷಿಸುತ್ತಿದ್ದಳವಳು. ಆ ತರುಣಿಯ ಉಜ್ವಲವಾದ ಸೌಂದರ್ಯವು ಮೈಮೇಲಿನ ಅಸ್ತವ್ಯಸ್ತವಾದ ಕರಿವಸುದೆಗೆಯನ್ನು ಭೇದಿಸಿ ಸ್ತ್ರೀಯತ್ವದ ಸಂಪೂರ್ಣ ಚಲವಿಕೆಯನ್ನು ಪ್ರದರ್ಶಿಸುವಂತಿತ್ತು. ಸುದೃಢಬಾಲಕನನ್ನು ಕಾಣಿಕೆಯಾಗಿ ಕೊಟ್ಟು, ಮಾನವ ಕುಲದ ವೈಭವವನ್ನು ಹೆಚ್ಚಿಸಬಲ್ಲವಳಾಗಿದ್ದಳು. ತಾಯ್ತನವೇ ಮೂರ್ತಿವೆತ್ತು ಬಂದಂತಿತ್ತು ಅವಳ ಆಕಾರ. ಆದರೂ ಅವಳು ತನ್ನ ಗಂಡು ಮಗುವನ್ನು ಕೊಂದ ಆರೋಪಕ್ಕಾಗಿ ವಿಚಾರಣೆಗೆ ಗುರಿಯಾಗಿದ್ದಳು ಇದೊಂದು ಪವಿತ್ರ ಸಮಸ್ಯೆ!

ನ್ಯಾಯಾಧೀಶನು ಅಪರಾಧಿನಿಯತ್ತ ಹೊರಳಿ ಹೇಳಿದ.

"ಎಲ್ಲಾ ಹೀಂಗ, ಒಬ್ಬ ಹೆಣ್ಣು ಮಗಳು ಮಾಡಬಹುದಾದ ಅತ್ಯಂತ ಹೀನ ಅಪರಾಧಕ್ಕಾಗಿ, ನಿನ್ನ ಮಗುವನ್ನು ಕೊಂದ ತಪ್ಪಿಗಾಗಿ ನ್ಯಾಯಾಸನದೆದುರು

ತ್ತಿಂತಿರುವೆ. ದೇವರ ಸಾಕ್ಷಿಯಾಗಿ ನೀನು ಅಪರಾಧಿಯೆ ನಿರಪರಾಧಿಯೆ ಎಂ ದು ಕೇಳುತ್ತೇನೆ."

ಆ ಹೆಣ್ಣುಮಗಳು ಕಿಕ್ಕಿರಿದ ನ್ಯಾಯಾಲಯವನ್ನೆಲ್ಲ ಒಮ್ಮೆ ನಿರುಕಿಸಿ ನೋ ಡಿ ನಿರ್ಧಾರದ ಕೆಳದನಿಯಲ್ಲಿ ಇಂತು ನುಡಿದಳು.

"ಅಪರಾಧಿನಿ? ಹೌದು ನೀವು ಹಾಗೆ ಹೇಳಿದರೆ ನಾನು ಅಪರಾಧಿ ನಿಯು. ಆದರೆ ಯಾರ ಅಪರಾಧ ಹೆಚ್ಚಿನದು? ನನ್ನ ಮಗುವನ್ನು ಪ್ರೀತಿಸಿ ಅವನು ಮಾನವನಾಗಿ ಬೆಳೆದು ಈ ವಿಶಾಲ ಪೃಥ್ವಿಯಲ್ಲಿ ಈ ವಿಚಿತ್ರ ಜಗತ್ತಿ ನಲ್ಲಿ ಜೀವನದ ಸುಖ ಸವಿಯುವ ಮೊದಲೇ ಅವನನ್ನು ನನ್ನ ಕೈಗಳಿಂದ ಕೊಂದ ನನ್ನ ಅಪರಾಧ ಹೆಚ್ಚಿನದೋ? ಇಲ್ಲವೇ ಅವನು ತರುಣನಾಗುವ ವರೆಗೆ ನನ್ನ ಪೋಷಣೆಗೆ ಬಿಟ್ಟುಕೊಟ್ಟು ಅವನನ್ನು ನೆತ್ತರಿನ ಕಾಲುವೆ ಹರಿ ಯುತ್ತಿರುವ ರಣಾಂಗಣದಲ್ಲಿ ತೋಪುಗಳ ಗುಂಡಿಗೆ ಆಹುತಿಯಾಗಲು ಕೇಳಿ ಪಡೆದುಕೊಳ್ಳುವ ನಿಮ್ಮ ಅಪರಾಧ ಹೆಚ್ಚಿನದೋ? ನೀವು ನನ್ನನ್ನು ಕೊಲೆ ಪಾತಕಿಯೆಂದು ಹೇಳಬಹುದು ಆದರೆ ದೇವರೆದುರಿನಲ್ಲಿ ನೀವೇ ಹತ್ಯಕಾರಿ ಗಳು ನಾನಲ್ಲ! ನಾನು ನನ್ನ ಮಗನನ್ನು ಪ್ರೀತಿಸುವೆನೆಂದು ನೀವು ಭಾವಿಸುವ ದಿಲ್ಲವೇ? ಅವನು ನನ್ನಲ್ಲಿ ಮೂಡಿದ ಕ್ಷಣದಿಂದ ನಾನವನನ್ನ ಪ್ರೀತಿಸು ತ್ತಿದ್ದೆ, ನನ್ನ ಮಗುವಿನ ಜನ್ಮಕ್ಕಾಗಿ ನಾನು ಹಾತೊರೆಯುತ್ತಿದ್ದೆ. ಅವನು ಜನಿಸಿದ ಎರಡು ದಿನಗಳಲ್ಲಿಯೇ ನನ್ನ ಗಂಡನು ವರ್ಡನದ ಭೀಕರ ಕಾಳಗ ದಲ್ಲಿ ಹತನಾದನೆಂಬ ಸುದ್ದಿ ಬಂತು ದೇಶಕ್ಕಾಗಿ ಅವನು ಪ್ರಾಣತ್ಯಾಗ ಮಾಡಿ ದನು. ಅವನಿಗಾಗಿ ನಾನು ಹೆಮ್ಮೆಪಡಬೇಕು ಎಂದು ಎಲ್ಲರೂ ಹೇಳಿದರು.

"ಹೆಮ್ಮೆ! ತಲೆತಿರುಕನೊಬ್ಬನ ಗೌರವರಕ್ಷಣೆಗಾಗಿ ಫ್ರಾನ್ಸದಲ್ಲಿ ಕಗ್ಗೊ ಲೆಗೀಡಾಗಿ ಕೊಳೆಯುತ್ತ ಬಿದ್ದಿರುವ ಸಾವಿರಾರು ಜನರಲ್ಲಿ ನನ್ನ ಮಗುವಿನ ತಂದೆಯೂ ಒಬ್ಬವನಾದನೆಂಬ ಹೆಮ್ಮೆ! ನಾನು ಆ ಸುದ್ದಿಯನ್ನು ಕೇಳಿದ ಕೂಡಲೆ ನನ್ನ ಮಗುವನ್ನು ಮೂಕಜೀವಿಯಂತೆ ಕೊಲ್ಲಲು ಅವಕಾಶ ಕೊಡ ಬಾರದೆಂದು ನಾನು ನಿರ್ಧರಿಸಿದೆ. ಅಂದು ಸಂಜೆಗೆ ನಾನವನನ್ನು ಅಪ್ಪಿ ಕೊಂಡು ಮುದ್ದಿಟ್ಟು ಅವನ ಪುಟ್ಟಬಾಯನ್ನು ನನ್ನ ಕೈಯಿಂದ ಮುಚ್ಚಿಬಿಟ್ಟೆ. ನಿಮ್ಮಿಂಥ ಅವನನ್ನು ಉಳಿಸಿಕೊಳ್ಳಲು ನಾನು ಅವನಿಗೆ ಕೊಟ್ಟುದನ್ನು

ಅಂದರೆ ಅವನ ಪ್ರಾಣವನ್ನು ಹೀರಿದೆ. ನನ್ನ ಮಗನನ್ನು ನಾನು ಕೊಂದುದು ಅಪರಾಧವೆ ಎಂಬುದನ್ನು ದೇವನೊಬ್ಬನೆ ನಿಷ್ಕರ್ಷಿಸಬಲ್ಲನು. ದೇವರು ನನಗೆ ಮಗನನ್ನು ಕೊಟ್ಟನು. ಇನ್ನು ಮುಂದೆ ನಿಮ್ಮ ಅಧಿಕಾರದಿಂದ ಅವನನ್ನು ಉಳಿಸಲು ನಾನು ಅವನನ್ನು ತಿರುಗಿ ದೇವರಿಗೆ ಒಪ್ಪಿಸಿದೆ.

ಉತ್ಸಾಹಪೂರಿತ ; ತನ್ನ ಮಾತು ಮುಗಿಸುವ ಹೊತ್ತಿಗೆ ಜನರೆಲ್ಲ ಗೊಂಬೆಗಳಂತಾಗಿದ್ದರು. ಅವಳ ಮಾತು ಮುಗಿದೊಡನೆ ಗುಜು ಗುಜು ಪ್ರಾರಂಭವಾಯಿತು.

" ಈಕೆ ಹುಚ್ಚಿಯಿದ್ದಾಳೆ. ಮಾತಾಡಲು ಈಕೆಗೆ ಅಪ್ಪದ ಕೊಡಬಾರದಾಗಿತ್ತು " ಎಂದು ಕೂಗಿದರು.

" ಅವಳ ಹೇಳಿಕೆ ಸರಿಯಾಗಿದೆ ಸಂಹಾರ ಮಾಡುವ ರಾಷ್ಟ್ರಕ್ಕಾಗಿ ನಾನು ಮಕ್ಕಳನ್ನಾದರೂ ಏಕೆ ಹೆರಬೇಕು. " ಎಂದು ಹೆಣ್ಣುದನಿಯೊಂದು ಜನಸಾಗರದಿಂದ ಗರ್ಜಿಸಿತು

" ಇದೇ ಸರಿ " ಎಂದು ಜನತೆಯಲ್ಲಿ ಪುನಃ ಗುಣುಗುಟ್ಟತೊಡಗಿತು. ಹೆಚ್ಚುತ್ತಿರುವ ರೋಷಸೂಚಕವಾದ ಈ ದನಿಯು ಬರಬರುತ್ತ ಅಸಹ್ಯವಾಯಿತು.

"ಇದನ್ನು ನಿಲ್ಲಿಸಲೇಬೇಕು. ನ್ಯಾಯಾಲಯದ ಕೆಲಸ ಮುಗಿಯಿತೆಂದು ತಿಳಿಸಿಬಿಡಿರಿ. ಇನ್ನೊಂದು ನಿಮಿಷದಲ್ಲಿ ಜನರು ಕೈಮೀರಿ ಹೋಗುವರು ." ಎಂದು ನ್ಯಾಯಾಧೀಶನ ಸಮೀಪದಲ್ಲಿ ಕುಳಿತಿದ್ದ ಜನರಲ್ಲ ವಾನ ಹೀನೆ ಮನನು ನ್ಯಾಯಾಧೀಶನ ಕಿವಿಯಲ್ಲಿ ಉಸುರಿದನು.

ನ್ಯಾಯಾಧೀಶನು ಒಂದು ಸಂಕೇತ ಮಾಡಿದನು.

"ಸದ್ದು, ಸದ್ದು. ಇಲ್ಲದಿದ್ದರೆ ನ್ಯಾಯಾಲಯವನ್ನು ಕೂಡಲೇ ವಿಸರ್ಜಿಸಬೇಕಾದೀತು. " ಎಂದು ಕೃಕಾರಿಯು ಅರಚಿದನು.

ಸದ್ದು ಕಡಿಮೆಯಾಯಿತು. ಅಸ್ಪಷ್ಟವಾದ ಗುಜುಗುಜು ಕೇಳಬರುತ್ತಿತ್ತು ತುಸು ಸಮಯದ ನಂತರ ಅದೂ ಅಡಗಿತು. ನಂತರ ಬಂದ ಇಬ್ಬರು ಸಾಕ್ಷಿಗಳೂ ಅದೇ ಕತೆಯನ್ನು ಹೇಳಿದರು.

"ಮಾನ್ಯರೇ, ನೀವು ಸಾಕ್ಷಿಗಳ ಹೇಳಿಕೆಯನ್ನು ಕೇಳಿದಿರಿ. ಆರೋಪಿಯಂತೂ ತನ್ನ ಅಪರಾಧವನ್ನು ಒಪ್ಪಿದ್ದಾಳೆ ಅವಳಿಗೆ ಮರಣದಂಡನೆಯನ್ನು ವಿಧಿಸಬೇಕೆ, ಎಂಬುದನ್ನು ಹೇಳಿರಿ" ಎಂದು ನ್ಯಾಯಾಧೀಶರು ನಿರ್ಣಾಯಕರನ್ನು ಕೇಳಿದರು.

ಅವರು ತಮ್ಮಲ್ಲಿಯೇ ಒಂದೆರಡು ನಿಮಿಷ ಮಾತುಕತೆ ನಡಿಸಿದರು. ನಂತರ ಅವರ ಪ್ರಮುಖನು ನಿಂತು "ಇವಳು ಕಾಯಿದೆ ಭಂಗ ಮಾಡಿರುವಳಷ್ಟೇ ಅಲ್ಲ ಆದರೆ ಪಿತೃಭೂಮಿಗೂ ಅಪರಾಧಿನಿಯಾಗಿದ್ದಾಳೆ, ಇವಳಿಗೆ ಮರಣದಂಡನೆಯಾಗಬೇಕೆಂದು ನಮ್ಮ ಅಭಿಪ್ರಾಯವಾಗಿದೆ" ಎಂದು ನ್ಯಾಯಾಧೀಶನಿಗೆ ಅರುಹಿದನು.

ಇಡೀ ಜನತೆಯೇ ನಿಟ್ಟುಸಿರಿಟ್ಟಿತು.

"ನೀವು ಕೊಲೆಪಾತಕರು! ನಮ್ಮ ಮಕ್ಕಳನ್ನು ಕೊಲ್ಲುತ್ತೀರಿ. ಅವರನ್ನು ನಾವು ನಿಮ್ಮ ಕೈಯಿಂದ ಉಳಿಸಿದರೆ ಕೊಲೆಪಾತಕರೆಂದು ಹೆಸರಿಟ್ಟು ದಂಡಿಸುತ್ತೀರಿ" ಎಂದು ಹೆಂಗಸಿನ ದನಿಯೊಂದು ಕೇಳಬಂತು.

"ಸದ್ದು" ಎಂದು ಸೇವಕನು ಗದ್ದರಿಸಿದ.

ಅಲ್ಲಿದ್ದ ಇಡೀ ಜನತೆಯೆ ಕ್ಷುಬ್ಧವಾಗಿತ್ತು ಆದರೆ ದಂಡಿತ ಸ್ತ್ರೀಯು ಮಾತ್ರ ಸ್ಥಿತಪ್ರಜ್ಞಳಂತಿದ್ದಳು.

ಅವಳ ಕಣ್ಣುಗಳಲ್ಲಿ ದಿವ್ಯ ತೇಜ ಹೊಳೆಯುತ್ತಿತ್ತು. ಐಹಿಕ ವಿಚಾರಣೆ ದಂಡನೆಗಳನ್ನೆಲ್ಲ ಹಿಂದೆಬಿಟ್ಟು ಅವಳು ಈಗಾಗಲೇ ಮುನ್ನಡೆದಿರುವಳೆಂದು ಯಾರಾದರೂ ಭಾವಿಸಬಹುದಾಗಿತ್ತು. ನ್ಯಾಯಾಧೀಶರು ಭೀಕರಮರಣದಂಡನೆಯನ್ನು ಸಾರುವಾಗ ಕೂಡ ಅವಳು ಅವರ ಕಡೆಗೆ ಮುಖ ತಿರುಗಿಸಿದ್ದಿಲ್ಲ. ನ್ಯಾಯಾಲಯದ ತೆರೆದಿಟ್ಟ ಕಿಟಕಿಯಾಚೆಗೆ ಕಾಣುವ ಸೂರ್ಯನ ಹೊಂಬಿಸಿಲಿನಲ್ಲಿ ಮಂದನೋಟವನ್ನು ಅವಳು ದಿಟ್ಟಿಸುತ್ತಿದ್ದಳು.

ಅವಳನ್ನು ಕರೆದೊಯ್ಯಲು ಬಂದ ಕಾವಲಿನವನು ಅವಳ ಭುಜ ತಟ್ಟಿದಾಗಲೇ ಅವಳಿಗೆ ಎಚ್ಚರಿಕೆ. ಅವಳುಹೊರಳಿ ರಕ್ತಾಸ್ತಮಾನ ಸೂರ್ಯನನ್ನು ಬೆಟ್ಟುಮಾಡಿ ತೋರಿಸಿ "ನೆತ್ತರ! ಎಲ್ಲೆಡೆಗೆ ನೆತ್ತರ!! ಎಲ್ಲವೂ ನೆತ್ತರದಲ್ಲಿ ಮಿಂದಿದೆ ಕಾಣಲಾರಿರಾ?" ಎಂದಳು.

ಕೂಡಲೇ ವಿಕಟಹಾಸಗೈದು ಎಚ್ಚರತಪ್ಪಿ ನೆಲಕ್ಕುರುಳಿದಳು.

# ತಾಯಿ

## ೧

ಸೇನಾಪತಿಯು ತನ್ನ ಸಂಗಾತಿಗಳ ಕಡೆಗೆ ಕಡೆಗಣ್ಣಿನ ನೋಟ ಬೀರಿದನು.

" ಪರಿಸ್ಥಿತಿಯನ್ನು ಎದುರಿಸಲೇ ಬೇಕು. ಇನ್ನೂ ಕೆಲವು ಘಟನೆಗಳು ಸಂಭವಿಸಿದರೆ ಸಾಕು, ಕ್ರಾಂತಿಯ ಕಿಡಿಹೊತ್ತಲು ತಡ ವಾಗದು. ಜನರ ಆಕ್ರೋಶ ದಿನದಿನಕ್ಕೆ ಹೆಚ್ಚುತ್ತಿರುವುದು ನಮಗೆ ಕೇಳಿ ಬರುತ್ತಿದೆ" ಎಂದು ಸೇನಾಪತಿಯು ಉದ್ವಿಗ್ನನಾಗಿ ನುಡಿದನು.

" ಮೃತ್ಯುಮುಖಿ " ಅಪ್ಪದಳದ ಸಮವಸ್ತ್ರದಲ್ಲಿದ್ದ ದೀರ್ಘಕಾಯದ ಅಧಿಕಾರಿಯೊಬ್ಬನು ಗಹಗಹಿಸಿ ನಕ್ಕನು.

" ನಿಜ, ಸೇನಾಪತಿಗಳೇ ಇದನ್ನು ತಡೆಯಲೇ ಬೇಕು. ನಾನಿಂದು ಬೀದಿಯಲ್ಲಿ ಬರುವಾಗ ಒಬ್ಬ ಹೆಂಗಸು ನನ್ನನ್ನು ಕೊಲೆಪಾತಕನೆಂದು ಕರೆ ದಳು. ಈ ಬೊಗಳಿಕೆಯನ್ನು ನಿಲ್ಲಿಸಬೇಕು. ಆದರೆ ಹೇಗೆ ? ಒಕ್ಕಟ್ಟಿ ನಲ್ಲಿಯೇ ನಮ್ಮ ಬಲವಿದೆ. ಈ ಸ್ತ್ರೀಯರ ಕೂಗು ನಮ್ಮ ಜನಜಂಗುಳಿಯ ಎದೆಯನ್ನು ತಟ್ಟಿತೆಂದರೆ ನಮ್ಮ ಶಕ್ತಿಯು ಹ್ರಾಸವಾಗುವದು." ಎಂದು ಆ ದೀರ್ಘಕಾಯನು ನುಡಿದನು.

ಕೆಲ ನಿಮಿಷ ಮೌನ, ನಂತರ ದೃಢದೇಹಿಯಾದ ಕುಳ್ಳನೊಬ್ಬನು ಎದ್ದು ಹೀಗೆ ಹೇಳಿದನು.

"ಒಕ್ಕಟ್ಟೇ ಬಲವೆಂದು ತಾವು ಹೇಳುವುದು ಸರಿ. ನಾವು ಅತಿ ಮಾನವರಂತಿದ್ದೇವೆಂಬುದನ್ನು ಜಗತ್ತಿಗೆ ಇದುವರೆಗೆ ತೋರಿಸಿಕೊಟ್ಟಿದ್ದೇವೆ. ನಮ್ಮ ಸೈನ್ಯವು ಸೋಮುನದಿಯ ದಡದಲ್ಲಿ ಬೀಡುಬಿಟ್ಟಿದೆ. ಬೆಲ್ಜಿಯಂ. ಸರ್ಬಿಯಾ, ಪೋಲಂಡ, ರುಮೇನಿಯಾಗಳು ನಮ್ಮ ವಿಶಾಲ ಜರ್ಮನ ಸಾಮ್ರಾಜ್ಯದ ಪ್ರಾಂತಗಳಾಗಿವೆಯಷ್ಟೆ. ಶಸ್ತ್ರ ಬಲದಿಂದ ಜರ್ಮನಿಯನ್ನು

ಜಯಿಸುವುದು ಸಾಧ್ಯವಿಲ್ಲೆಂದು ನಮ್ಮ ಕಡು ವೈರಿಯಾದ ಇಂಗ್ಲಂಡು ಒಪ್ಪಿದೆ. ಆದರೆ ಈ ನಮ್ಮ ಖ್ಯಾತಿಯ ಬುಡಕ್ಕೆ ಗೆದ್ದಲುಹತ್ತಿದೆ. ಆ ಗೆದ್ದಲ ಹುಳು ಯಾರು ? ಸ್ತ್ರೀ ತಮ್ಮ ಪತಿಗಳ ಪ್ರಾಣವನ್ನು ತಿರುಗಿ ಬೇಡುತ್ತಿರುವ ಜರ್ಮನಿಯ ಮಹಿಳೆಯರೇ ಆ ಗೆದ್ದಲು. ಇದನ್ನು ನಿರ್ಮೂಲವಮಾಡಬೇಕು. ಅವರಲ್ಲಿಯ ಕಾಯ್ತನದ ಆಶೆಯನ್ನು ನಿರ್ಮೂಲ ಮಾಡಬೇಕು. ಕಾಮ ಭಾವನೆಯ ಲವಲೇಶವೂ ಇಲ್ಲದ ಸ್ತ್ರೀಪುರುಷರ ಅತಿಮಾನವ ಸಮಾಜವನು ನಿರ್ಮಿಸಬೇಕು. ದ್ವೇಷಭಾವವೊಂದನ್ನೇ ಅಳವಡಿಸಿಕೊಂಡ ನಿರ್ದಯರನ್ನೂ ಸೃಜಿಸಬೇಕು. ಮಾನವ ಸಹಜವಾದ ದೌರ್ಬಲ್ಯವು ಅವರಲ್ಲಿಂಕೂಡದು. ಪಿತೃಭೂಮಿಯ ಸೇವೆಯ ಹೊರತು ಅವರಿಗೆ ಬೇರೊಂದು ಧರ್ಮ ಕರ್ತವ್ಯ ವಿರಬಾರದು. ”

”ಅದ್ಭುತ ವಿಚಾರ, ಸರದಾರರೇ ಆದರೆ ಅದನ್ನು ಸಾಧಿಸುವದೆಂತು ? ” ಎಂದು ರಾಜಕುಮಾರನು ತನ್ನ ಆಸನದಿಂದ ಪುಟಿದೆದ್ದು ಸಂಭ್ರಮದಿಂದ ಹೇಳಿದನು.

ಆ ಸರದಾರನು ಕೆಮ್ಮಿ ಗಂಟಲಸರಿಪಡಿಸಿಕೊಂಂಡು ಪುನಃ ಪ್ರಾರಂಭಿಸಿದನು.

“ ಜೇನಾ ವಿಶ್ವವಿದ್ಯಾಲಯದಲ್ಲಿ ಜೀವ ಜಂತುಗಳ ಪ್ರೊ. ಡಾ. ಫ್ರೆಡರಿಕ್ ವರ್ನರರ ಹೆಸರನ್ನು ತಾವು ಕೇಳಿರಬಹುದು. ವಿಚಾರ ಪುಸ್ತಕವಾಗಿ ಜೀವಾಣುಗಳ ಆಯ್ಕೆ ನಡೆಸಿ ಅದ್ಭುತವಾದ ಸಸ್ಯಗಳನ್ನೂ, ಅತಿಮಾನವರನ್ನೂ ನಿರ್ಮಿಸಬಹುದೆಂಬ ತತ್ವದ ಪ್ರಯೋಗವನ್ನು ಸಂಪೂರ್ಣ ಸಾಧಿಸುವುದಕ್ಕಾಗಿ ಪ್ರೊಫೆಸರರು ಕೆಲತಿಂಗಳ ಹಿಂದೆ ರಾಜೀನಾಮೆಕೊಟ್ಟು ಹೊರಬಿದ್ದಿದ್ದಾರೆ, ಅವರ ಆಯ್ಕೆಯ ಆ ತತ್ವದ ಪ್ರಕಾರ ಸದ್ಯದ ಮಾನವ ಕುಟುಂಬದಲ್ಲಿ ಕಂಡುಬರುವ ದೌರ್ಬಲ್ಯಗಳನ್ನು ತಪ್ಪಿಸಬಹುದಾದ್ದರಿಂದ ಮತ್ತು ಸರ್ವರ ಪೀಳಿಗೆಯ ನೀತಿಮತ್ತೆಯನ್ನೇ ಕೆಡಿಸಿಬಿಡುವ ಸೌಮ್ಯ ಗುಣಗಳನ್ನೂ ದೂರಿಂಸಬಹುದಾದ್ದರಿಂದ ಈಗ ಜಗತ್ತಿನಲ್ಲಿಯ ಯಾವದೇ ಜನಾಂಗವನ್ನು ಶಕ್ತಿಯಲ್ಲಿ ಮೀರಿಸಬಲ್ಲ ಅತಿಮಾನವ ಜನಾಂಗವನ್ನು ನಿರ್ಮಿಸುವುದು ಸಾಧ್ಯವಿದೆಂದು ಆ ಪ್ರೊಫೆಸರರ ನಂಬುಗೆಯಿದೆ, ಪ್ರೀತಿ, ಮೋಹ

ಗಳಿಂದ ಪರವಶರಾಗಿದ್ದ ದಂಪತಿಗಳ ಗರ್ಭಧಾರಣೆಯ ಕಾಲದಲ್ಲಿಯೇ ಈ ಭಾವನೆಗಳು ಬಿತ್ತಲ್ಪಡುತ್ತವೆ. ಆದ್ದರಿಂದ ಈ ಗರ್ಭವು ಬೆಳೆದು ಕೂಸಾಗಿ ಈ ಜಗತ್ತನ್ನು ಕಾಣಲು ಕಣ್ಣು ತೆರೆಯುವಾಗಲೆ ಸ್ಥಾಯೀಭಾವಗಳನ್ನೆಲ್ಲ ಅಳವಡಿಸಿಕೊಂಡೇ ಬಂದಿರುತ್ತದೆ. ಆದರೆ ಗರ್ಭಧಾರಣೆಯ ಕಾಲದಲ್ಲಿ ಕಾಮೋದ್ರೇಕವಿಲ್ಲದಿದ್ದರೆ ಅತಿಮಾನವ ಜನಾಂಗವನ್ನು ನಿರ್ಮಿಸುವದು ಸಾಧ್ಯವೆಂದು ಡಾ ವರ್ನರರ ಮತವಾಗಿದೆ. ಆದರೆ ಇದನ್ನು ಅವನು ಹೇಗೆ ಸಾಧಿಸಬಹುದು ? ಲೈಂಗಿಕ ಸಮಾಗಮವಿಲ್ಲದೆ ಅಂದರೆ ಚುಚ್ಚುಮದ್ದನ್ನು ಕೊಟ್ಟು ಗರ್ಭಧಾರಣೆ ಮಾಡಿಸಿ ಈ ಕಾರ್ಯಕ್ಕೆ ಯೋಗ್ಯರಾದವರನ್ನು ಆರಿಸುವದಷ್ಟೇ ನಮ್ಮ ಕೆಲಸ. ಇದು ಪ್ರಾರಂಭಕ್ಕೆ ಕಠಿಣವಾಗುವದು ಸಹಜ. ಆದರೆ ತಾಳ್ಮೆಯಿಂದ ಪ್ರಯತ್ನಿಸಿದರೆ ಯಶದೊರೆಯದಿರದು. ಇನ್ನು ಇಪ್ಪತ್ತು ವರ್ಷಗಳಲ್ಲಿ ಜಗತ್ತಿನ ಪ್ರಭುಗಳಾಗಬಲ್ಲ ಅತಿಮಾನವ ಕುಲವೊಂದು ಜರ್ಮನಿಯಲ್ಲಿ ಹುಟ್ಟುವದು ! ಈ ಯುದ್ಧ ಕಾಲದಲ್ಲಿ ಹುಟ್ಟಿದ ಬಾಲಕರು ನರಪೇತಗಳಾಗುವುದರಿಂದ ಇನ್ನು ಮುಂದಿನ ಪೀಳಿಗೆಯು ದುರ್ಬಲವಾಗಿ ನಾವು ಇಂಥ ಅತಿಮಾನವರನ್ನು ಇಟ್ಟುಕೊಂಡಿರುವ ಒಂದೇ ಕಾರಣದಿಂದ ಜಗತ್ತಿನಲ್ಲಿ ಶ್ರೇಷ್ಠತಮರಾಗುವೆವೆಂಬುದನ್ನು ಮರೆಯಲಾಗದು; ರಾಜಕುಮಾರರೆ ! ಈ ನಮ್ಮ ಜರ್ಮನಿಯಲ್ಲಿ ಸಹ ಸಾಮಾನ್ಯ ಸ್ತ್ರೀ ಪುರುಷರು ದುರ್ಬಲ ಬಾಲಕರನ್ನೇ ಹೆರಬಲ್ಲರು. ಅವು ಕೂಡ ಎಳತನದಲ್ಲಿಯೇ ಮರೆತುಹೋಗುವವು. ಆದರೆ ಪ್ರೊಫೆಸರ ವರ್ನರರ ಯತ್ನವು ಫಲಿಸಿದರೆ ನಾವೀ ಗಂಡಾಂತರವನ್ನೆ ದುರಿಸಿ ನಮ್ಮ ಶಕ್ತಿ ಸಾಮರ್ಥ್ಯದಿಂದ, ಶ್ರೇಷ್ಠತೆಯಿಂದ ಜಗತ್ತಿನ ಪ್ರಭುಗಳಾಗಬಲ್ಲೆವು.

ವಿಚಾರಗ್ರಸ್ತನಾದ ರಾಜಕುಮಾರನು ತನ್ನ ಗದ್ದವನ್ನು ತುರಿಸಿಕೊಂಡನು.

" ಇಂಥ ಪ್ರಯೋಗವನ್ನು ಅತಿ ಗೌಪ್ಯದಿಂದ ಸಾಧಿಸಬೇಕಾಗುವದು. ಜನರಿಗೇನಾದರೂ ಇದರ ಸುಳಿವು ಹತ್ತಿದರೆ ಕ್ರಾಂತಿಯೇ ಸಂಭವಿಸುವದು, ನಮ್ಮ ಹಸ್ತಕರು ಎಲ್ಲೆಡೆಗೂ ತುಂಬಿಕೊಂಡಿರಬೇಕು ಮತ್ತು ನಾವು ನಾವು ನಡೆಸಲಿರುವ ಪ್ರಯೋಗದ ಗಾಳಿ ಕೂಡ ನಮ್ಮ ಜನರಿಗೆ ಸೋಂಕಬಾರದು, ಎಂದು ರಾಜಕುಮಾರನು ಸೂಚಿಸಿದನು.

"ಈ ಪ್ರಯೋಗ ಜನ್ಯ ಬಾಲಕರ ಶಿಕ್ಷಣದ ಏರ್ಪಾಡು ಹೇಗೆ ಆಗಬೇಕೆಂದು ತಮ್ಮಅಭಿಪ್ರಾಯವಿದೆ."" ಎಂದು ಸಮವಸ್ತ್ರದಲ್ಲಿಯ ಇನ್ನೊಬ್ಬ ಸೈನ್ಯಾಧಿಕಾರಿಯು ಹೇಳಿದನು. "ಆ ಬಾಲಕರನ್ನು ಅವರ ತಾಯ್ತಂದೆಗಳಿಗೆ ಒಪ್ಪಿಸಿಬಿಟ್ಟರೆ ನಾವು ಈಗ ತಪ್ಪಿಸಬೇಕೆನ್ನುವ ಪರಿಣಾಮವೇ ಉಂಟಾಗುವದು."

"ಅವರಲ್ಲಿ ಹೆಚ್ಚು ಬಾಲಕರನ್ನು ಸರಕಾರವೇ ವಶಪಡಿಸಿಕೊಳ್ಳುವದು. ತಮ್ಮ ಮಕ್ಕಳ ಹೊಟ್ಟೆಬಟ್ಟೆಗೆ ಕೊಡುವದು. ತಮ್ಮ ಕೈಯಿಂದಾಗದು ಎಂದು ಜನರು ಕೂಗುತ್ತಿರುವಾಗ ಪ್ರತಿಯೊಂದು ಜಿಲ್ಲೆಯಲ್ಲಿಯ ಕೆಲವು ಬಾಲಕರನ್ನು ಪೋಷಿಸುವ, ಅವರಿಗೆ ಶಿಕ್ಷಣ ಕೊಡುವ ಹೊಣೆಯನ್ನು ಸರಕಾರವು ಹೊತ್ತರೆ ಜನರಿಗೆ ಅದೊಂದು ಔದಾರ್ಯದಕೃತಿಯಾಗಿಯೇ ಕಾಣೀತು. ಆದರೆ ಪ್ರಯೋಗ ಜನ್ಯ ಬಾಲಕರನ್ನೇ ನಾವು ಶಿಕ್ಷಣಕ್ಕಾಗಿ ಆರಿಸಿಕೊಳ್ಳುವ ವಕ್ಷತೆ ವಹಿಸಬೇಕು." ಎಂದು ಸರದಾರನು ಹೇಳಿದನು.

ಸಮವಸ್ತ್ರಧಾರಿಯಾದ ಆ ಇನ್ನೊಬ್ಬ ಸೈನ್ಯಾಧಿಕಾರಿ ಮಾನ ಹಾರ್ಟ ವೆಗನು ಸರದಾರನನ್ನು ಸಾಶಂಕ ದೃಷ್ಟಿಯಿಂದ ನೋಡಿದನು.

"ಇಂಥದು ಸಾಧ್ಯವಿಲ್ಲೆಂದು ನನಗೆನಿಸುವುದಿಲ್ಲ. ಆದರೆ ಈ ಪ್ರಯೋಗ ನಡೆಯಿಸಬೇಕಾದರೆ ನಾನು ನನ್ನ ಶಕ್ತಿ ಸರ್ವಸ್ವದಿಂದ ನೆರವಾಗುವೆನು." ಎಂದು ಹರ್ಟವೆಗನೆಂದನು.

"ಉಪಕೃತನಾದೆ ಮೇಜರ ಹಾರ್ಟವೆನ್" ಎಂದು ಸರದಾರನು ಅವನ ಕೈ ಕುಲುಕಿಸುತ್ತಾ ಹೋದ. "ಪ್ರೊ. ವರ್ನರನು ನಿನ್ನೆ ರಾತ್ರಿ ಬರ್ಲಿನಕ್ಕೆ ಬಂದಿದ್ದಾನೆ. ನಾಳೆ ಸಾಯಂಕಾಲ ನೀವು ನನ್ನೊಡನೆ ಬಂದರೆ ಎಲ್ಲವನ್ನೂ ಅವರ ಬಾಯಿಂದ ಕೇಳುವಿರಂತೆ. ರಾಜಕುಮಾರರೇ! ಈ ವಿಷಯದಲ್ಲಿ ಸ್ವೇಚ್ಛೆಯಿಂದ ಆಚರಿಸಲು ತಮ್ಮ ಸಮ್ಮತಿಯಿದೆಂದು ಭಾವಿಸಿದ್ದೇನೆ." ಎಂದು ಸರದಾರನು ಕೇಳಿದನು.

"ಪ್ರಿಯ ಸರದಾರ, ಇದೆಲ್ಲ ಅದ್ಭುತವಾಗಿ ತೋರುತ್ತದೆ. ಆದರೆ ಈ ಪ್ರಯೋಗವು ಸಿದ್ಧಿಸಿದರೆ ಅದರಿಂದುಂಟಾಗುವ ಪರಿಣಾಮಗಳು ರೋಮಾಂಚಕಾರಿಯಾಗುವವು. ಈ ವಿಚಾರ ಸಾಧನೆಗಾಗಿ ನೀನು ಬೇಕಾ

ದ್ದನ್ನು ಮಾಡಬಹುದೆಂದು ನಾನು ಬರೆದುಕೊಡುವ ಅಗತ್ಯವೇ ಇಲ್ಲ. ಜರ್ಮನ ಸಾಮ್ರಾಜ್ಯದ ಉತ್ಕರ್ಷಾಭಿವೃದ್ಧಿಯನ್ನು ನಿನಗೆ ಒಪ್ಪಿಸಿಬಿಟ್ಟಿದ್ದೇನೆ." ಎಂದು ರಾಜಕುಮಾರನು ತನ್ನ ಅಭಯಹಸ್ತ ನೀಡಿದನು

೨

ಮರುದಿನ ಸಂಜೆಗೆ ಮೇಜರ ಹಾರ್ಟವೆಗನು ಸರದಾರನೊಡನೆ ಗ್ರ್ಯಾಂಡ ಹಾಟಲಿಗೆ ಹೋಗಿ ಪ್ರೊ. ವರ್ನರನನ್ನು ಭೆಟ್ಟಿಯಾದನು. ಪ್ರೊಫೆಸರನು ಅವರನ್ನು ಆದರದಿಂದ ಬರಮಾಡಿಕೊಂಡು ಅವರಿಗೆ ಭೋಜನಾದಿ ಸತ್ಕಾರಗಳನ್ನು ನೀಡಿದನು. ನಂತರ ಅವರನ್ನು ತನ್ನ ಏಕಾಂತ ನಿಲಯಕ್ಕೆ ಕರೆದೊಯ್ದು ಅವರು ಬಂದ ಕಾರಣವನ್ನು ವಿಚಾರಿಸಿದರು.

"ನಿಮ್ಮ ತತ್ವಗಳ ವ್ಯಾವಹಾರಿಕತೆಯ ಬಗ್ಗೆ ಮೇಜರ ಹಾರ್ಟವೆಗರಿಗೆ ತೋರಿದ್ದರಿಂದ ಅವರು ನಿಮ್ಮನ್ನು ಕಾಣಬಯಸಿದರು. ನೀವು ಅವರಿಗೆ ಮನಗಾಣಿಸಿ ಕೊಟ್ಟರೆ ಅವರು ನಮಗೆ ಬೇಕಾದ ರೀತಿಯಲ್ಲಿ ಸಹಾಯಮಾಡಲು ಸಿದ್ಧರಿದ್ದಾರೆ" ಎಂದು ಸರದಾರನು ತಿಳಿಸಿದನು.

ಪ್ರೊಫೆಸರನು ಹಾರ್ಟವೆಗನನ್ನು ಒಮ್ಮೆ ವಿಚಾರಪೂರ್ವಕವಾಗಿ ನೋಡಿ ಹೇಳತೊಡಗಿದ.

"ನನ್ನ ವಿಚಾರವನ್ನು ಮೊದಲಸಲ ಹೇಳಿದ ಕೂಡಲೆ ನಿಮ್ಮಂಥವರಿಗೆ ವಿಚಿತ್ರವೂ, ಅಸಂಬದ್ಧವೂ ಆಗಿ ತೋರುವುದು ಎಂಬುದು ನನಗೆ ಗೊತ್ತಿದೆ ಆದರೆ ನೀವು ನನ್ನ ತತ್ವವನ್ನು ಸಂಪೂರ್ಣವಾಗಿ ಅರಿತುಕೊಂಡರೆ ಅದರಲ್ಲಿ ಅಸಾಧ್ಯವಿರುವುದಾವದೂ ಇಲ್ಲವೆಂದು ಕಂಡುಬರದಿರದು. ತರ್ಕ ಶುದ್ಧವಾದ ತೀರ ಉಚಿತವಾದ ಸುಪ್ರಜಾ ಜನನದ ತತ್ವವನ್ನೇ ಆಧರಿಸಿ ಈ ಶೋಧ ನಡೆಸಲಾಗಿದೆ."

"ಮನುಷ್ಯನ ಸ್ವಭಾವವು ಅವನ ಜನನದ ಪೂರ್ವದಲ್ಲಿ ನಡೆದುಬಂದ ವರ್ಚಸ್ಸಿನಿಂದಲೆ ಉಂಟಾಗುವದೆಂದು ನೀವು ನಂಬುವಿರಾ?" ಎಂದು ಹಾರ್ಟವೆಗನು ಕೇಳಿದ.

" ನಿಜ. ಮಗುವು ಬೆಳೆದಂತೆಲ್ಲ ತನ್ನದೇ ಆದ ಕೆಲವು ಗುಣ ಧರ್ಮಗಳನ್ನು ಬೆಳಿಸಿಕೊಳ್ಳಬಹುದು. ಆದರೆ ಸ್ವಲ್ಪ ತಾಳ್ಮೆಯಿಂದ ವಿಚಾರಣೆ ನಡೆಸಿದರೆ ಈ ಗುಣಗಳ ಬೀಜಗಳನ್ನು ಆ ಮಗುವಿನ ಯಾವನೋ ಒಬ್ಬ ಪೂರ್ವಜನಲ್ಲಿ ಕಂಡುಕೊಳ್ಳಬಹುದು. ಜನನದ ಪೂರ್ವದಲ್ಲಿ ಆ ಮಗುವಿಗೆ ದೊರೆಯುವ ಲಕ್ಷಣದಿಂದಲೆ ಅದರ ಶೀಲವು ರೂಪುಗೊಳ್ಳುತ್ತದೆ. ಗರ್ಭದಾನದ ಕಾಲದಲ್ಲಿಯೇ ಮಾನವ ಸಹಜವಾದ ಸಕಲ ಗುಣಗಳನ್ನೂ ಸ್ತ್ರೀಯಲ್ಲಿ ಬಿತ್ತಲಾಗುತ್ತದೆ. ಇಲ್ಲಿಗೆ ನನ್ನ ಪ್ರಯೋಗದ ಪ್ರಾರಂಭ, ನಾನೆಣಿಸಿದಂತೆ ಪ್ರಯೋಗವು ಯಶಸ್ವಿಯಾದರೆ ಅರಿಷಡ್ವರ್ಗಗಳಿಗೆ ಒಳಗಾಗದ ಮಾನವನನ್ನು ನಿರ್ಮಿಸಬಲ್ಲೆನು. ನನ್ನ ಸ್ತ್ರೀ ಪುರುಷರಲ್ಲಿ ದೈಹಿಕ ನೈತಿಕ ದೌರ್ಬಲ್ಯ ಕಾಣಲಾರದು."

" ನಿಮ್ಮ ಪ್ರಯೋಗಕ್ಕೆ ಬೇಕಾಗುವ ಸಲಕರಣೆಗಳನ್ನು ದೊರಕಿಸಿದ್ದಾಯಿತೆ ? " ಎಂದು ಕೇಳಿದ ಹಾರ್ಷವೆಗ.

" ನನ್ನ ಪ್ರಯೋಗಕ್ಕೆ ಆಧಾರವಾಗ ಬಲ್ಲ ರೈತವರ್ಗದಲ್ಲಿ ನಾನಿನ್ನೂ ಸಂಶೋಧನೆ ನಡೆಸಬೇಕಾಗಿದೆ. ಸ್ತ್ರೀತ್ವದ ಅವ್ಯಂಗ್ಯ ಮಾದರಿಯೊಂದನ್ನು ನಾನಿನ್ನೂ ಹುಡುಕಬೇಕಾಗಿದೆ. ಆ ನಿರವದ್ಯಾಂಗಿಯಲ್ಲಿ ಕಾಮಭಾವನೆಯು ಸುಳಿವೇ ಇರಕೂಡದು. ಇಲ್ಲವೆ ಅದೇ ಪ್ರಾರಂಭವಾಗಿದ್ದರೂ ಅಡ್ಡಿಯಿಲ್ಲ.

ಸರದಾರನು ಹುಬ್ಬುಗಳನ್ನು ಏರಿಸಿದ.

" ಇದೊಂದು ಸುಗ್ರೀವಾಜ್ಞೆಯಾಯ್ತು. ಪ್ರಿಯವರ್ನರ"

" ನೀನೆಣಿಸಿದಷ್ಟು ಕಠಿಣವಿಲ್ಲ. ಸರದಾರ " ಎಂದು ಪ್ರೊಫೆಸರನು ಹೇಳಿದ ನನ್ನಂತೆ ನೀನು ಸ್ತ್ರೀ ಪುರುಷರನ್ನು ಅಭ್ಯಸಿಸಿದರೆ ಕೆಲವು ಮಹಿಳೆಯರಲ್ಲಿ ಕಾಮಭಾವನೆಯು ಬಹುಶಃ ಇರುವದೆ ಇಲ್ಲವೆಂಬುದು ನಿನಗೂ ತಿಳಿಯುತ್ತಿತ್ತು. ಅನೇಕ ಮುಗ್ಧೆಯರು ಪ್ರೇಮವನ್ನೇ ಪ್ರೀತಿಸುತ್ತಿದ್ದಾರೆಂದು ಹೇಳಬಹುದು. ಇದಕ್ಕೆ ರಸಿಕತೆಯೆನ್ನಬಹುದು. ಅವರ ಮನವೊಲಿಸಬಲ್ಲ ಪುರುಷನಿಗೆ ಆ ಲಲನೆಯರ ಆದರ ಪ್ರಾಪ್ತವಾಗುವದು, ಆಗ ಕಾಮವು ಅವರಲ್ಲಿ ಸುಳಿಯುವುದಿಲ್ಲವೆಂದೆ ಹೇಳಬಹುದು. ' ಹತ್ತರಲ್ಲಿ ಒಂಬತ್ತು

ಮುಗ್ಧೆಯರು ತಿಳುವಳಿಕೆಗಿಂತ ಕುತೂಹಲದಿಂದಲೆ ಪುರುಷರಿಗೆ ತಮ್ಮ ಮೈಯೊಡ್ಡುತ್ತಾರೆ. ಆ ಕುತೂಹಲವೊಮ್ಮೆ ಶಾಂತವಾದ ನಂತರ ಅವಳು ಮದುವೆಯಾದರೆ ಅವಳಿಗೆ ಕಾಮಜೀವನವನ್ನು ತಿರಸ್ಕರಿಸುವದು ಅಸಾಧ್ಯವಾದರೂ ವಿವಾಹ ಸಂಬಂಧಿಯಾದ ಆತನ್ನು ಅಸಮಾಧಾನದಿಂದಲೆ ಕಾಣುತ್ತಾಳೆ. ಕಾಮುಕ ನಾರಿಯರ ಇನ್ನೊಂದು ವರ್ಗವಿದೆ. ಇವರು ಪ್ರೌಢೆಯರಾಗುತ್ತ ಹೋದಂತೆ ಇವರಲ್ಲಿ ಕಾಮುಕವೃತ್ತಿ ಹೆಚ್ಚುತ್ತ ಹೋಗುತ್ತದೆ. ಇನ್ನು ಕಾಮುಭಾವನೆಗಳನ್ನೆಲ್ಲಾ ಸಂಹಾರ ಮಾಡಿ ಕೇವಲ ಹೆಚ್ಚು ಧನ ನೀಡುವವರಿಗೆ ತನ್ನ ಮೈಕೊಡುವ ಪಣ್ಯಾಂಗನೆಯರೂ ಇದ್ದಾರೆ. ನನ್ನ ಪ್ರಥಮ ಪ್ರಯೋಗಕ್ಕೆ ಇಂಥ ಹೆಣ್ಣೆ ಬೇಕು. ಅವಳು ರತಿಸಮಾನಳೂ, ನಿರವರ್ಣಾಂಗಿಯೂ ಆಗಿರಬೇಕು. ಯಾವ ದೌರ್ಬಲ್ಯವಿಲ್ಲದ ಪರಿಪೂರ್ಣ ಮಾನವನನ್ನು ಪಡೆಯಬೇಕೆಂಬುದೇ ನನ್ನ ಹಾರೈಕೆ "

" ನೀವು ಬಣ್ಣಿಸುವ ಇಂಥ ಸ್ತ್ರೀಯನ್ನು ಎಲ್ಲಿ ಸಂಪಾದಿಸಬಹುದು. ಪಣ್ಯಾಂಗನೆಯರೇನೋ ಹೇರಳವಾಗಿ ದೊರೆಯುತ್ತಾರೆ. ಆದರೆ ಅವರ ವರ್ಗದಲ್ಲಿ ಪರಿಪೂರ್ಣತೆ ಪಡೆದ ಮಹಿಳೆಯು ದೊರೆಯುವುದು ಕಠಿಣ." ಎಂದು ಸರದಾರನು ತನ್ನ ತೊಂದರೆಯನ್ನು ಅರುಹಿದನು.

" ನಾನು ಈ ನಿಮ್ಮ ಮಾತುಗಳನ್ನು ತಿಳಿದುಕೊಂಡಿದ್ದರೆ ಆದರ್ಶ ತಾಯಿಯಾಗಲು ಯೋಗ್ಯಳಾದ ಮಹಿಳೆಯನ್ನು ನೀವು ಹುಡುಕುತ್ತಿದ್ದಿರಿ ಎಂದಲ್ಲವೆ ? " ಎಂದು ಹಾರ್ಟವೆಗನು ನಡುವೆ ಬಾಂಬು ಹಾಕಿದನು.

"ಹೌದು, ಆದೇ, ಜಗತ್ತಿನಲ್ಲಿ ಅನೇಕ ಸುಂದರಿಯರಿದ್ದಾರೆ. ಅವರೆಲ್ಲರು ದುರ್ಬಲ ಮಕ್ಕಳನ್ನು ಹೆರುವ ಯಂತ್ರಗಳಾಗಿದ್ದರಷ್ಟೆ. ನನಗೆ ಬೇಕಾದವಳು ಗಂಡುಳ್ಳಬಾಲೆ. ಮಾತೃತ್ವವೇ ಸ್ತ್ರೀಯ ವಿಧಿ. ಅವಳು ಒಲ್ಲೆಂದರೂ ಅದು ಅವಳ ಬೆನ್ನು ಬಿಡುವುದಿಲ್ಲ. ಆದ್ದರಿಂದಲೆ ಸ್ತ್ರೀಯರು ಜೀವನದ ಬೇರೆ ರಾಗ ರಾಗಗಳನ್ನು ಪ್ರವೇಶಿಸಿದರೂ ಅಲ್ಲಿ ಉಚ್ಚಾಂಕವನ್ನೂ ಮುಟ್ಟುವುದು ಅವರಿಗೆ ಸಾಧ್ಯವಾಗುವುದಿಲ್ಲ. ತಾಯ್ತನವನ್ನು ಲಕ್ಷಿಸುವ ಅವರು ಪ್ರಕೃತಿಯ ವಿರುದ್ಧವಾಗಿ ಆಚರಿಸಿದಂತಾಗುತ್ತದೆ." ಎಂದು ವರ್ನರನು ಹೇಳಿದ. ಕೆಲ

ನಿಮಿಷಗಳ ಮೌನದ ನಂತರ ಹಾರ್ಟವೆಗನು ಪ್ರೊಫೆಸರರಿಗೆ ಹೇಳ

"ನಿಮ್ಮ ಹೇಳಿಕೆಯೆಲ್ಲ ನನ್ನ ಮನ ಸೆಳೆದಿದೆ. ನಿಮ್ಮ ಪ್ರಯೋಗವು ಯಶಸ್ವಿಯಾದರೆ ನಮ್ಮ ಪಿತೃಭೂಮಿಗೆ ಅಪಾರ ಲಾಭವಿದೆ. ನಿಮ್ಮ ಪ್ರಥಮ ಪ್ರಯೋಗದ ವಸ್ತುವನ್ನು ಕಂಡುಹಿಡಿಯಲು ನನಗೆ ಅನುಮತಿ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಪ್ರಯೋಗವು ಯಶಸ್ವಿಯಾದ ತಜ್ಜನ್ಯ ಬಾಲಕನನ್ನು ನಾನು ನನ್ನ ಮಗನೆಂದೆ ನಿಮ್ಮ ಶಿಕ್ಷಣದಂತೆಯೇ ಕಾಪಾಡಿಕೊಳ್ಳುತ್ತೇನೆ. ನಮ್ಮ ರಾಷ್ಟ್ರದ ಉತ್ಕರ್ಷಕ್ಕಾಗಿ ಹೆಣಗುವವರ ಮುಖಂಡನನ್ನಾಗಿಸುತ್ತೇನೆ. ಇನ್ನು ಇಪ್ಪತ್ತು ವರ್ಷಗಳಲ್ಲಿ ಈ ಅತಿ ಮಾನವರ ಸೇನೆಯೇ ಜರ್ಮನಿಯಲ್ಲಿ ನಿರ್ಮಿತವಾದರೆ ನನಗೆ ಆತ್ಯಾನಂದವಾಗುವದು."

"ನಿಮ್ಮ ನೆರವು ಅತ್ಯಪಾರವಾದುದು ಹಾರ್ಟವೇಗ. ಪಿತೃಭುಮಿಗೆ ಸೇವೆಸಲ್ಲಸಬೇಕೆಂದಿರುವ ನಾನೂ ನಿಮ್ಮ ಸಹಾಯವನ್ನು ಒಪ್ಪದಿರಲಾರೆ. ನನ್ನ ವಿಚಾರವನ್ನೂ ಕಾರ್ಯಕಾರಿಯಾಗಿಸಲು ನಾನೂ ಪ್ರಯತ್ನ ಮುಂದರಿಸುತ್ತೇನೆ." ಎಂದು ಪ್ರೊಫೆಸರನು ಹೇಳಿದ.

"ಈ ಪ್ರಯೋಗಗಳಿಂದ ಹುಟ್ಟಬಹುದಾದ ಬಾಲಿಕೇಯರ ಗತಿಯೇನು ?" ಎಂದು ಸರದಾರನು ಕೇಳಿದನು.

"ಈ ಬಾಲಕರಿಗಿಂತ ಬಾಲೆಯರೇ ಹೆಚ್ಚಿಗೆ ಮಹತ್ವಪಡೆಯುವರು ಅವರಿಗೆ ವಿಶೇಷ ಸಂಸ್ಥೆಗಳಲ್ಲಿ ಶಿಕ್ಷಣ ಕೊಟ್ಟು ಪ್ರಾಯಕ್ಕೆ ಬಂದೊಡನೆ ಅತಿ ಮಾನವರ ಉತ್ಪಾದನೆಗಾಗಿ ಅವರನ್ನು ಉಪಯೋಗಿಸಲಾಗುವದು ಇಂಥ ಬಾಲಿಕೆಯರಿಂದಲೇ ಅತಿಮಾನವ ಜನಾಂಗವನ್ನು ನಿರ್ಮಿಸುವ ಹುಮ್ಮಸವಿದೆ. ನನಗೆ ಹುಟ್ಟಿದ ನೂರುಮಕ್ಕಳಲ್ಲಿ ಹತ್ತು ಬಾಲಕರು ನನ್ನ ವಿಚಾರಗಳ ಪ್ರತೀಕವಾದರೆ ನಮ್ಮ ರಾಷ್ಟ್ರವು ಜಗತ್ತಿನಲ್ಲಿಯೇ ಬಲಿಷ್ಠವಾಗುವದು"

"ನಿಮ್ಮ ಪ್ರಯೋಗಕ್ಕೆ 'ಬೇಕಾಗುವ 'ಪುರುಷ' ? ನೀವು ಅವನನ್ನು ಸಂಪಾದಿಸಿರುವಿರಾ ?" ಹಾರ್ಟವೆಗ ವಿಚಾರಿಸಿದ.

"ಆ ವಿಷಯದಲ್ಲಿ ನಾನು ಅತ್ಯಂತ ಯಶಸ್ವಿಯಾಗಿದ್ದೇನೆಂದು ಪ್ರೊಫೆ

ಸರನು ಹೇಳುವಾಗ ಅವನ ಕಣ್ಣುಗಳಲ್ಲಿ ಸಂಭ್ರಮ ತುಳುಕಾಡಿತು. " ಬಾಲ್ಟಿಕ್ ಸಮುದ್ರದ ದಂಡೆಯಲ್ಲಿಯ ಒಂದು ಹಳ್ಳಿಯಲ್ಲಿ ಒಬ್ಬ ಮೀನಗಾರ ನಿದ್ದಾನೆ. ಜೀವನವನ್ನೆಲ್ಲ ಕಡಲಮೇಲೆ ಕಳೆದಿದ್ದಾನೆ. ಉಕ್ಕಿನ ಮೈಕಟ್ಟು ಅವನದು. ಸಂಪೂರ್ಣ ನಿರೋಗಿ ಸಂಸ್ಕೃತಿಯ ಗಂಧವೂ ಅವನಿಗಿಲ್ಲ. ತನ್ನ ಹೆಸರನ್ನೂ ಕೂಡ ಬರೆಯುಲು ಬರುವದಿಲ್ಲ ಅವನಿಗೆ. "

" ಇಂಥ ಜನರ ಬಗ್ಗೆ ನನಗೆ ಸ್ವಲ್ಪ ಸಂದೇಹ. ಈ ಮೀನಗಾರನು ಅಸಂಸ್ಕೃತರಿದ್ದರೂ ಕಡಲಗಾನ ಅವರ ಹೃದಯವನ್ನು ತುಂಬಿರುತ್ತದೆ. ನಾವು ಕಾಣದ್ದನ್ನು ಅವರು ಕಾಣಬಲ್ಲರು." ಎಂದು ಹಾರ್ಟವೇಗನು ತನ್ನ ಸಂದೇಹವನ್ನು ತೋರಿದ.

ಪ್ರೋಫೆಸರನು ಗಹಗಹಿಸಿ ನಕ್ಕನು.

ನೀವು ಹೇಳುವ ಅವನ ಹೃದಯದಲ್ಲಿ ಕಾವ್ಯವೆಂಬುದೇ ಇಲ್ಲ. ಎಲ್ಲ ವಿಷಯುಗಳಲ್ಲಿಯೂ ಅವನು ಪಶುವೇ ಆಗಿದ್ದಾನೆ. ತನ್ನ ಅವಿಧೇಯ ಕೃತಿ ಗಳಿಗಾಗಿ ಅವನು ಇಪ್ಪತ್ತು ವರ್ಷ ಶಿಕ್ಷೆಗೊಳಗಾಗಿ ಇಲ್ಲಿಂದ ಕಣ್ಣೆರತೆಯಲ್ಲಿ ರುವ ಸೆರೆಮನೆಯಲ್ಲಿದ್ದಾನೆ. ಫೆಡರಿಕನೆಂಬ ಇಲ್ಲಿಯ ಶಿಲ್ಪಿಯು ತನ್ನ ಮಾ ದರಿಗಾಗಿ ಅವನನ್ನು ಆರಿಸಿಕೊಂಡಿದ್ದನು ಅವನೆ ನನಗೆ ಮೀನಗಾರನ ವಿಷ ಯವನ್ನು ತಿಳಿಸಿದ. ಆದರೆ ಸೈನ್ಯಾಧಿಕಾರಿಗಳು ನನಗೆ ಅವನನ್ನು ಭೆಟ್ಟಿಯಾ ಗಗೊಡಲಿಲ್ಲ. ಸಾಮ್ರಾಟನ ಆಜ್ಞಾಪತ್ರವನ್ನು ಒಯ್ದ ನಂತರ ಎಲ್ಲವೂ ಸುಸೂ ತ್ರವಾಯಿತು. ಅವನ ಹತ್ತಿರ ನಾನು ನನ್ನ ಕೆಲಸವನ್ನು ಮುಗಿಸಿಕೊಂಡು ನಂತರ ಅ ವನನ್ನು ಬಂಧು ಮುಕ್ತಮಾಡಲಾಗುವದು. ಅವನನ್ನು ಯುದ್ಧ ಭೂಮಿಗೆ ಕಳಿಸಲಾಗುವದು. ಅಲ್ಲಿಂದ ಅವನು ಹಿಂತಿರುಗುವದಿಲ್ಲ. ತನ್ನ ಈ ಕಥೆಯನ್ನು ಇಲ್ಲಿಯವರೆಗೆ ಅವನು ತಿಳಿಸಲು ಇಲ್ಲಿಗೆ ಬರದಂತೆ ವ್ಯವಸ್ಥೆ ಮಾಡಲಾಗುವದು.

" ಪ್ರೊಫೆಸರರೆ ನಿಮಗೆಲ್ಲ ತಿಳಿದುದೆ ಆಗಿದೆ. ನಾನು ಮಾತ್ರ ಈ ಕಡ ಲಿನ ಮನುಷ್ಯನನ್ನು ಆರಿಸಿಕೊಳ್ಳುತ್ತಿರಲಿಲ್ಲ. ಬೇರೆ ಯಾವನೊಬ್ಬನನ್ನಾ ದರೂ ಹುಡುಕಿಕೊಳ್ಳಬಾರದೆ ? " ಎಂದು ಹಾರ್ಟವೇಗನ ಕೇಳಿದ.
ಎಂದು ಹಾರ್ಟವೇಗನ್ನು ಕೇಳಿದ.

"ಅವನು ಸರ್ವವಿಧದಲ್ಲಿಯೂ ಪರಿಪೂರ್ಣವಾಗಿದ್ದಾನೆ ಇಂಥ ಆದರ್ಶ ಪುರುಷನನ್ನು ಪಡೆಯಲು ನಾನು ಪುನಃ ಅನೇಕವರ್ಷ ತಪಶ್ಚರ್ಯ ಮಾಡಬೇಕಾದೀತು ಅವನಲ್ಲಿ ಹೃದಯವೇನಾದರೂ ಇದ್ದಿದ್ದರೆ ಅವೆಂದಿಗೊ ಬಾಲ್ಟಿಕ್ ಸಮುದ್ರದಲ್ಲಿ ಮುಳುಗಿ ಹೋಗಿದೆ ಇಲ್ಲವೇ ಅವನೇ ಅದನ್ನು ಸುರೆಯಲ್ಲಿ ಮುಳುಗಿಸಿ ಬಿಟ್ಟಿದ್ದಾನೆ ಕಳೆದ ಸಲ ಅವನು ಶಿಕ್ಷೆಗೊಳಗಾದಾ ಕುಡಿದು ಉನ್ಮತ್ತನಾಗಿದ್ದನು. ಅವನನ್ನು ಬಂಧಿಸಲು ಆರು ಜನರು ಸಾಲದೆ ಹೋದರು. ಕೈಗೆ ಸಿಕ್ಕದ್ದನ್ನೆಲ್ಲ ಪುಡಿಪುಡಿ ಮಾಡುತ್ತಿದ್ದನು. ಒಂದು ವಾರದಿಂದ ಅವನನ್ನು ಒಂದೇಸಮನೆ ಸುರಾಪಾನ ನಡೆಸಿದ್ದನು. ಬೇರೆಯವರಾದರೂ ಅಷ್ಟು ಕುಡಿದಿದ್ದರೆ ಪರಲೋಕವನ್ನು ಕಾಣುತ್ತಿದ್ದರು ಆದರೆ ಕಠಿಣಕಾಯನಾದ ಅವನಿಗೆ ನೀರುಕುಡಿದಂತೆನಿಸುತ್ತಿತ್ತು. ನನ್ನ ಪ್ರಯೋಗಕ್ಕೆ ಅತ್ಯುಪಯುಕ್ತವಾದ ಅದ್ಭುತ ಪಶುವಾಗಿದ್ದಾನೆ." ಎಂದು ಅರಳು ಸಿಡಿದಂತೆ ವರ್ನರನು ಮಾತಾಡಿದನು.

"ಹೀಗೋ, ನಿಮಗೆ ಸಮಾಧಾನವಾಗಿದ್ದರೆ ನಾನೇನೂ ಹೇಳುವದಿಲ್ಲ ಪರಿಣಾಮವೇನಾಗುವದೆಂಬುದನ್ನು ಕಾಲನೇ ನಿರ್ಧರಿಸಬಲ್ಲನು. ಎಂದು ಮೋಜರ ಹಾರ್ಟವೇಗನು ಕೈಯಲ್ಲಿಯ ಸಿಗರೇಟನ್ನು ಎಸೆದು ಹೊರಡಲು ಎದ್ದುನಿಂತನು.

೩

ಉಪಹಾರ ಗೃಹದಲ್ಲಿ ವಿವಿಧ ವಿನೋದಾವಳಿಯ ಕಾರ್ಯಕ್ರಮ ಪ್ರಾರಂಭವಾಗಿತ್ತು. ಆಗ ರಾತ್ರಿ ಹತ್ತು ಗಂಟೆಯಾಗಿರಬಹುದು. ಉಪಹಾರ ಗೃಹದ ಕೊನೆಯ ಒಂದು ಮೂಲೆಯಲ್ಲಿ ಜನರ ಗುಂಪುಗಟ್ಟಿಕೊಂಡು ಹರಟೆ ಕೊಚ್ಚುತ್ತ ಕುಳಿತಿದ್ದರು. ಎದುರಿಗಿದ್ದ ಮೇಜುಗಳ ಮೇಲೆ "ಬೀರ"ದ ಗ್ಲಾಸುಗಳಿದ್ದವು. ಆಚೆ ತುದಿಯಲ್ಲಿಯ ರಂಗಭೂಮಿಯ ತೆಳುವಾದ ತೆರೆಯ ಹಿಂಬದಿಯಲ್ಲಿ ನಡೆದಿದ್ದ ವ್ಯಾಪಾರಗಳು ಇವರ ಚಿತ್ತವನ್ನಾಕರ್ಷಿಸಿದ್ದವು. " ರಂಗಭೂಮಿಯ ಮೇಲೆ ಒಬ್ಬ ದೃಢಕಾಯಳಾದ ಸ್ತ್ರೀಯು ಹಾಡುತ್ತ ಕುಳಿತಿದ್ದಳು.

ಆ ಹಾಡೂ ಗಾಯಕಿಯೂ ಜನರಿಗೆ ಮೆಚ್ಚುಗೆಗಳಾಗಿದ್ದವು. ಹಾರ್ಮೋನಿಯಮು ನುಡಿಸುವವನಿಗೆ ಅವಳು ಇನ್ನೊಂದು ಹೊಸಹಾಡನ್ನು ನುಡಿಸುವಂತೆ ಹೇಳಿ ಹೇಳಿ ಉಪಹಾರ ಗೃಹದಲ್ಲಿ ನೆರೆದಿದ್ದವರನ್ನು ಒಮ್ಮೆ ನಿರುಕಿಸಿದಳು. "ಸುರಾವಾಸ" ದತ್ತ ಕೂಡ ಅವಳ ನೋಟ ಸಹಜವಾಗಿ ಹೊರಳಿತು. ಅಲ್ಲಿ ಸುರೆಯ ಹೊರತು ಬೇರೆ ಯಾವ ಅಗ್ಗದ ಪೇಯವನ್ನೂ ಒದಗಿಸಲಾಗುತ್ತಿರಲಿಲ್ಲ ಆದ್ದರಿಂದಲೆ ಆ ಅಟ್ಟದ ಮೇಲಿನ ಭಾಗಕ್ಕೆ ಸುರಾವಾಸವೆಂಬ ಹೆಸರು ಬಿದ್ದಿತ್ತು. ಅಲ್ಲಿ ಅಂದವಾಗಿ ಮಂಡಿಸಿದ ಪುಟ್ಟಮೇಜಗಳ ಸುತ್ತಲೂ ಅಧಿಕಾರಿಗಳು ಕುಳಿತುಕೊಂಡು ಭಕ್ಷಪಾನಾದಿಗಳಲ್ಲಿ ತೊಡಗಿದ್ದರು. ಕಲಾವಿದೆಯರು ರಂಗಭೂಮಿಯ ಮೇಲಿನ ತಮ್ಮ ಕಾರ್ಯವನ್ನು ಮುಗಿಸಿಕೊಂಡು ಬಂದ ನಂತರ ಈ ಅಧಿಕಾರಿಗಳ ಜೊತೆಗೆ ಉಪಾಹಾರ ಸ್ವೀಕರಿಸುತ್ತಿದ್ದರು. ಒಂದು ಮೇಜಿನ ಮುಂದೆ ಕುಳಿತು ಬಿಸ್ಕತ್ತೊಂದನ್ನು ತಿಂದು ಪೂರೈಸುವುದರೊಳಗಾಗಿ ಬೇರೊಂದು ಮೇಜಿನ ಮೇಲಿನ ಕಾಜಿನ ಗ್ಲಾಸಿನಲ್ಲಿಯ ಆರಕ್ತ ಮದಿರೆಯನ್ನು ಕಂಡು ಅಲ್ಲಿ ನೋಡುತ್ತಿದ್ದರು. ಕಲಾವಿದೆಯರಿಗೆ ಸ್ವಾಭಾವಿಕವಾಗಿ ಎಲ್ಲರಿಂದಲೂ ಸ್ವಾಗತ ದೊರೆಯುತ್ತಿತ್ತು

ಗಾಯಕಿಯು ತನ್ನ ಹಾಡನ್ನು ಮುಗಿಸಿ ಎದ್ದಕೂಡಲೆ ಎಲ್ಲರೂ ಅವಳನ್ನು ತಮ್ಮ ಕಡೆಗೆ ಆಮಂತ್ರಿಸಹತ್ತಿದರು, ಅಷ್ಟೊಂದು ಪ್ರಿಯಳಾಗಿದ್ದಳು ಅವಳು ಅಲ್ಲಿ ನೆರೆದ ಆ ಜನರಲ್ಲಿ ಒಂದೆರಡು ನಿಮಿಷಗಳಲ್ಲಿ ಅವಳು ನಾಗರಿಕ ವೇಷದಲ್ಲಿದ್ದ ಇಬ್ಬರು ಅಧಿಕಾರಿಗಳು ಕುಳಿತಿದ್ದರು. ಅವರ ಜೊತೆಗೆ ಕಪ್ಪುಗೂದಲಿನ ಸ್ತ್ರೀಯೊಬ್ಬಳೂ ಇದ್ದಳು.

"ಬೆಪ್ಪ, ಈಗ ಜಗತ್ತು ನಿನ್ನನ್ನು ಹೇಗೆ ಕಾಣುತ್ತಿದೆ" ಎಂದು ಅಧಿಕಾರಿಗಳಲ್ಲೊಬ್ಬನು ಅವಳೆದುರಿಗಿನ ಗ್ಲಾಸಿಗೆ ಸುರೆಯನ್ನು ಸುರಿದು ಕೇಳಿದ ಅವನು ತನ್ನ ಗ್ಲಾಸನ್ನೆತ್ತಿಕೊಂಡು ಉಳಿದ ಮೂವರನ್ನೂ ಅಳುಪೂರ್ಣ ದೃಷ್ಟಿಯಿಂದ ನೋಡಿದ-

"ಚೆನ್ನು" ಎಂದು ಅವನು ಗ್ಲಾಸನ್ನು ಬಾಯಿಗೆ ಹಚ್ಚಿದ, ಉಳಿದ

ನರೂ ಹಾಗೇ ಮಾಡಿದರು, ನಂತರ ಚಿಟ್ಟಿಯು ಅವನನ್ನು ಅವಲೋಕಿಸಿದಳು,

" ಏನು, ಜಗತ್ತು ನನ್ನನ್ನು ಹೇಗೆ ಕಾಣುತ್ತಿದೆ" ಎಂದು ಕೇಳಿದಿಲ್ಲವೆ ? ಉಪಜೀವನವೆ ಎಲ್ಲರಿಗೂ ಕಾಣುವಾಗ ಇದೆಂಥಪ್ರಶ್ನೆ ಕೇಳುವದು? ಪೇಟೆಯಲ್ಲಿ ಬೆಲೆಗಳ ಅಹಮಹಿಮಿಕೆಯಿಂದ ಏರುತ್ತಿರುವಾಗ ನಮ್ಮ ನಿರ್ದೇಶಕರು ನಮ್ಮ ಸಂಬಳಗಳನ್ನು ದಿನಕ್ಕೊಂದು ರೀತಿ ಇಳಿಸುತ್ತಿರುವಾಗ ನಮಗೇನೂ ಕೆಲಸವೇ ಉಳಿಯಲಿಕ್ಕಿಲ್ಲೆಂದು ತೋರುತ್ತದೆ. ನಿಮ್ಮಂಥ ಕೆಲವು ಉತ್ತಮ ಸ್ನೇಹಿತರಿಲ್ಲದಿದ್ದರೆ ಈ ಬರ್ಲಿನದಲ್ಲಿಯ ವಿನೋದಾವಳಿ ಕಾರ್ಯಕ್ರಮಗಳೆಂದಿಗೊ ಕುಗ್ಗಿಹೋಗುತ್ತಿದ್ದುವು. ನಾವೆಲ್ಲರೂ ಲೊಟ್ಟಾವೆಂದಳಷ್ಟು ಸುದೈವಿಗಳಲ್ಲ. ಅವಳ ಬೇಡಿಕೆಗಳೇ ಕಡಿಮೆ" ಎಂದು ಚಿಟ್ಟಿಯು ತನ್ನ ಅಂದವಾದ ಮುಖವನ್ನು ಕಿವುಚಿ ತಿರಸ್ಕಾರವನ್ನು ಸೂಚಿಸಿದಳು.

"ಲೊಟ್ಟಾವೆಂಬಳು, ಈರಾತ್ರಿಹೊಸದಾಗಿ ಇಲ್ಲಿಹಾಡುವವಳೇಅಲ್ಲವೇ ? ಎಂದು ಆ ನಾಲ್ವರಲ್ಲಿಯ ಹಿರಿಯನು ಕೇಳಿದ.

ಹೌದು, ಎನ್ನುತ್ತ ಚಿಟ್ಟಿಯು ಎದುರಿಗಿದ್ದ ಚೋಂಡಾದ ತಟ್ಟಿಗೆ ಕೈಹಾಕಿದಳು "ಸ್ಟೀನನು ಅವಳನ್ನು ಆರಿಸಿ ತಂದಿದ್ದಾನೆ. ಲೊಟ್ಟಾ, ಎಲ್ಲಿಯವಳು. ಅವನು ಅವಳನ್ನು ಎಲ್ಲಿಂದ ತಂದನೆಂಬುದು ಯಾರಿಗೂ ತಿಳಿದಿಲ್ಲ. ಅವಳ ಮಾಟ ಎಷ್ಟು ದಿನ ಸ್ಟೀನನನ್ನು ಸೆರೆಹಿಡಿಯಬಲ್ಲದೊ ನೋಡಬೇಕು. ಅದೊ ಅಲ್ಲಿ ಸ್ಟೀನ ಬಂದನು ಲೊಟ್ಟಾ ಕೂಡ ಬಂದಿರಬೇಕು. ಅವನೆಂದಿಗೂ ಅವಳ ಬೆನ್ನು ಬಿಡುವುದಿಲ್ಲ" ಎಂದು ಚಿಟ್ಟಿಯು ನುಡಿದು ತನ್ನ ಸ್ನೇಹಿತರು ಬಂದರೆಂದು ಎದ್ದುಹೋದಳು.

" ವಿಚಿತ್ರವ್ಯಕ್ತಿ, ದನಿಯಿಲ್ಲ, ಸಂಗೀತವಿಲ್ಲ, ಆದರೂ ಎಲ್ಲರ ಪರಿಚಯ ಮಾಡಿಕೊಂಡಿದ್ದಾಳೆ. ಆದರೆ ಟೋನಿ ಲೊಟ್ಟಾವೆಂದಳ ಬಗ್ಗೆ ನಿನಗೇನಾದರೂ ಗೊತ್ತಿದೆಯೇ? ಎಂದು ಅಧಿಕಾರಿಯು ಆ ಕಪ್ಪುಗೂದಲಿನ ಸ್ತ್ರೀಯನು ವಿಚಾರಿಸಿದ.

ಅವಳು ತನಗೇನೂ ಪರಿಚಯವಿಲ್ಲೆಂಬ ಅವಿರ್ಭಾವವನ್ನು ತೋರಿಸಿದಳು.

'ಬೆಟ್ಟಿ ಈಗ ಹೇಳಿದ್ದಕ್ಕಿಂತ ಸ್ವಲ್ಪ ಹೆಚ್ಚಿಗೆ ತಿಳಿದಿದೆ. ವೆಂಟಳು ಅಷ್ಟೇನು ನಿಪುಣೆಯಾದ ಕಲಾವಿದೆಯಲ್ಲ. ಅತ್ಯಂತ ಸುಂದರಿಯಾಗಿದ್ದಾಳೆ. ಎರಡು ವರ್ಷಗಳ ಹಿಂದೆ ಫ್ರಾಂಕ ಫರ್ಟದಲ್ಲಿ ಅವಳು ಹಾಡಲಿಕ್ಕೆಂದು ರಂಗ ಭೂಮಿಗೆ ಬಂದಾಗ ಅವಳ ಚಲುವಿಕೆಯೇ ಅವಳನ್ನುಳಿಸಿತು. ಇಲ್ಲವಾದರೆ ಜನರು ಅವಳನ್ನು ಓಡಿಸಿಬಿಡುತ್ತಿದ್ದರು. ಯುದ್ಧ ಪೂರ್ವಕಾಲದಲ್ಲಿ ಅವಳು ಮ್ಯೂನಿಚದಲ್ಲಿ ಒಬ್ಬ ಶಿಲ್ಪಿಯ ಮಾದರಿಯಾಗಿದ್ದಾಳೆಂಬ ವಾರ್ತೆಯೂ ಇದೆ. ಈಗ ಸ್ಪೀನನು ಅವಳನ್ನು ಆರಿಸಿಕೊಂಡಿದ್ದರಿಂದ ಅವಳ ದೈವ ತೆರೆಯಿತೆನ್ನಬೇಕು. ಆದರೆ ಸ್ಪೀನನಂಥ ಪಶುವನ್ನು ಅವಳೆಂತು ತಾಳಿಕೊಳ್ಳುವಳೊ ನೋಡಬೇಕು." ಎಂದು ಟೋನಿಯ ಹೇಳಿದಳು.

ಬಳಿಕ ಈ ಮೂವರೂ ಬೆಟ್ಟಿಯ ಸ್ನೇಹಿತರತ್ತ ನೋಟ ಹೊರಳಿಸಿದರು. ಸ್ಪೀನನು ಬೆಟ್ಟಿಯೊಡನೆ ಮಾತಾಡುತ್ತಿದ್ದ. ವಿಷಯ ಲೋಲುಪತೆಯ ಮೂರ್ತಿಯಂತಿದ್ದ ಅವನನ್ನು ಎಲ್ಲಿದ್ದರೂ ಗುರುತಿಸಬಹುದಾಗಿತ್ತು. ಟೋನಿಯು ಹೇಳಿದಂತೆ ಅವನೇನೂ ಕಾಮಿನೀಚಿತ್ತಾಪಹಾರಕನಾಗಿರಲಿಲ್ಲ. ನೋಡಿದರೆ ಹೇಸಿಕೆಪಟ್ಟುಬೇಕಾದ ಸ್ವರೂಪ ಅವನದು. ಈ ಮೂವರೂ ಅವನನ್ನು ನೋಡುತ್ತಿದ್ದಾಗ ಅವನು ಬೆಟ್ಟಿಗೆ ಆಡಿದ ತನ್ನ ಗ್ರಾಮ್ಯವಿನೋದ ಭಾಷೆಯನ್ನೇ ನೆನೆದು ನಗುತ್ತಿದ್ದ. ಆಚೆಯ ಮೇಜಿನ ಹತ್ತರ ಕುಳಿತಿದ್ದು ತನ್ನ ಸ್ನೇಹಿತರಿಗೆ ಬಿಸ್ಕತ್ತಗಳನ್ನು ತೂರುತ್ತಿದ್ದ. ಹೀಗೆ ಎಸೆಯುತ್ತಿರುವಾಗ ಅವುಗಳಲ್ಲೊಂದು ಫ್ರೀಜನ ಕಾಲಿಗೆ ತಾಕಿತು.

'ಹುಡುಗನನ್ನು ಪೀಡಿಸುವದೇಕೆ, ಸುಮ್ಮನಿರಲಾರೆಯಾ ?' ಎಂದು ಬರ್ಲಿನರಬ್ಲಾನು ಕಣ್ಣು ಕಿಸಿದು ಬೆದರಿಸಿದನು. ಬರ್ಲಿನರಬ್ಲಾನು ಬೆಟ್ಟಿಯ ಸ್ನೇಹಿತ. ಅವನಿಗೆ ನಯ ವಿನಯಗಳೇನೂ ಗೊತ್ತಿರಲಿಲ್ಲ. ಆತನ ಜೊತೆಯಲ್ಲಿದ್ದವನೆ ಸಣ್ಣ ಬೆಳ್ಳನ ಹುಡುಗ ಫ್ರೀಜ. ಈ ಫ್ರೀಜನು ಅಶ್ವದಳದಲ್ಲಿ ಚಿಕ್ಕ ಅಧಿಕಾರಿಯಾಗಿದ್ದ. ಆದರೆ ಬರ್ಲಿನರಬ್ಲಾ—ಫ್ರೀಜರನ್ನು ಜತೆಯಾಗಿ ಕಂಡವರು 'ರೋಮಿಯೊ—ಜ್ಯುಲಿಯಟ್'ರೆಂದು ಪೀಡಿಸುತ್ತಿದ್ದರು. ಈಗ ಬರ್ಲಿನರಬ್ಲಾನು ಆಡಿದ ಮಾತು ಕೇಳಿ ಸ್ಪೀನನಿಗೆ ಹೊಟ್ಟೆಹಿಡಿಸಲಾರದಷ್ಟು ನಗುಬಂತು, ನಕ್ಕುಬಿಟ್ಟ.

"ಅವನು ತನ್ನನ್ನು ತಾನೇ ಕಾಪಾಡಿಕೊಳ್ಳಲಾರನೇ ? ಅವನಿಗೊಬ್ಬ ದಾಯಿ...ನ್ನು ಕೊಡುತ್ತೇನೆ"ಂದು ಸ್ಟೀನನು ಹೇಳಿದ.

ಇದನ್ನು ಕೇಳಿ ಫ್ರೀಜನ ಮುಖ ಕೆಂಪೇರಿತು. ಕೈ ಮುಷ್ಟಿಯನ್ನು ಬಿಗಿಯಾಗಿಸಿ... ಸಿಡಿಲು ಜಿಗಳು ಅವನ ತುಟಿಯ ಮೇಲೆ ಕುಣಿಯುತ್ತಿದ್ದವು. ಅಷ್ಟರಲ್ಲಿಯೆ ಯಾರನ್ನೋ ಅರಸುತ್ತಿರುವ ಲಲನೆಯೊಬ್ಬಳು ಸೋಪಾನಗಳ ಮೇಲೆ ಕಾಣಿಸಿಕೊಂಡಿದ್ದರಿಂದ ಅಲ್ಲಿ ನಡೆಯಬಹುದಾಗಿದ್ದ ವಾಗ್ಯುದ್ಧವು ತಪ್ಪಿತು.

ಪ್ರೌಢವಯಸ್ಕಳಾದ ಅವಳು ಸುಸು ಎತ್ತರವಾಗಿದ್ದಳೆಂದೆ ಹೇಳಬೇಕು. ರೇಷ್ಮೆಯ ನಯವಾದ ಉಡುಪಿನೊಳಗಿಂದ ಅವಳ ಲಾವಣ್ಯವು ಸೂಸುತ್ತಿತ್ತು ಅವಳ ರವಿಕೆಯನ್ನು ಹೊಲಿದ ಚಿಪ್ಪಿಗನ ಜಾಣ್ಮೆಯಿಂದ ಅವಳ ಭುಜಸ್ತನ ಪ್ರದೇಶಗಳ ಸೌಂದರ್ಯವು ಮನೋಹಾರಿಯಾಗಿತ್ತು. ಕೊರಳ ಪದಕ ದಿಂದೊಪ್ಪುದ ಮಣಿಹಾರವು ಅವಳ ಶುಂಖದಂಥ ಕೊರಳನ್ನು ಅಲಂಕರಿಸಿತ್ತು ಅವಳ ನೈವನಾಟ ಮುದ್ದಾಗಿತ್ತು. ಕಣ್ಣಿಗೆ ಹಚ್ಚಿದ್ದ ಕಾಡಿಗೆಯಿಂದ ಅವಳ ಕಣ್ಣುಗಳು ನೋಡಿಗೆಗೆ ಕಪ್ಪಾಗಿದ್ದವು. ಅವಳ ಕೇಶಪಾಶವು ಕಪ್ಪಾಗಿದ್ದರೂ ಅಲ್ಲಲ್ಲಿ ಬಂಗಾರದಲುಗಳು ಇಣುಕುತ್ತಿದ್ದವು. ಆದರೆ ಮಂಡಿಸಿದ್ದ ಮೇಜುಗಳನ್ನು ಲೆಕ್ಕಿಸದೆ ರೂಪಗರ್ವಿತೆಯಾದ ಅವಳು ಬರುತ್ತಿರುವ ನಡಿಗೆಯು ಅವಳ ಲಾವಣ್ಯಕ್ಕೆ ಕುಂದುಂಟು ಮಾಡುತ್ತಿತ್ತು. ಸ್ಟೀನನು ಕುಳಿತ ಮೇಜಿನ ಸಮೀಪಕ್ಕೆ ಅವಳು ಬಂದ ಕೂಡಲೆ ಉಪಹಾಸದ ನಗೆ ಬೀರಿ ಅವನ ಕಡೆಗೆ ಸಾಗಿದಳು.

'ಲೋಟ್ಟಾವೆಂಟ' ಎಂಬ ಹೆಸರಿನ ಗುಣು ಗುಣು ನಾದವು ಉಪಹಾರ ಗೃಹವನ್ನು ತುಂಬಿತು

"ನಾನು ಹುಡುಕುತ್ತಿದ್ದ ಸ್ತ್ರೀಯು ಇವಳೇ"ಎಂದು ಟೋನಿಯ ಜೊತೆಗಿದ್ದ ಅಧಿಕಾರಿಯು ನುಡಿದನು. "ವೆಂಟಳು ಅಸಾಮಾನ್ಯಳಂತೆ ತೋರುತ್ತಾಳೆ ನನ್ನನ್ನಾಕರ್ಷಿಸಿದ್ದಾಳೆ. ಕೆಲ ನಿಮಿಷ ಸ್ಟೀನನ ಮೇಜಿಗೆ ಹೋಗಲು ನನಗನುಮತಿ ಕೊಡುವಿಯಾ" ಎಂದು ಎದ್ದು ಬಿಟ್ಟ.

೪

ಮೇಲಿನ ಘಟನೆಯ ಮೂರು ತಾಸುಗಳ ನಂತರ ಉಪಹಾರ ಗೃಹದಿಂದ ಜನರೆಲ್ಲ ಹೊರಬಿದ್ದಿದ್ದರು. ಅಂದಿನ ವಿವಿಧ ವಿನೋದಾವಳಿಯಲ್ಲಿ ಭಾಗವಹಿಸಿದ್ದ ಕಲಾವಿದೆಯರ ಮಾತುಗಳ ಸವಿ ಸವಿಯಲೆಂದು, ಅವರೊಡನೆ ಕೆಲನಿಮಿಷವನ್ನಾದರೂ ಕಳೆಯಲೆಂದು ಹಿಂದುಳಿದ ಕೆಲವೇ ಜನರು ಸ್ವಪ್ರಯತ್ನಗಳಲ್ಲಿ ಮಗ್ನರಾಗಿದ್ದರು.

ಉಪಹಾರಗೃಹದ ಮೇಲಟ್ಟದ ಕಟಾಂಜನಕ್ಕೆ ಆತುನಿಂತು ಲೊಟ್ಟಾವೆಂಟೆಳು ಟೋನಿಯೊಂದಿಗಿದ್ದ ಆ ಸುಂದರ ಅಧಿಕಾರಿಯೊಡನೆ-ಮೇಜರ್‌ಹಾರ್ಟವೆಗನೊಡನೆ-ಮಾತುಕತೆಯಲ್ಲಿ ತೊಡಗಿದ್ದಳು. ನೆರೆದಿದ್ದ ಜನರು ಅವಳ ಕಾರ್ಯಕ್ರಮಕ್ಕೆ ಉತ್ತಮ ಸ್ವಾಗತವಿತ್ತಿದ್ದರೂ ಅವಳ ಆರಕ್ತ ಮುಖದಲ್ಲಿ ಸಿಟ್ಟೂ ಅಸಮಾಧಾನವೂ ಒಡೆದುಕಾಣುತ್ತಿದ್ದವು.

"ಜನರು ಹರ್ಷದಿಂದ ನನ್ನನ್ನು ಸ್ವಾಗತಿಸಿದ್ದು ಇವುಗಳನ್ನು ಕಂಡು" ಎಂದು ಲೊಟ್ಟಾವೆಂಟೆಳು ತನ್ನ ನಯವಾದ ರೇಷ್ಮೆಯ ಉಡುಪನ್ನೂ ಕೊರಳಲ್ಲಿಯ ಪ್ರದೀಪ್ತಮಾನ ಮಣಿಹಾರವನ್ನೂ ಮೇ. ಹಾರ್ಟವೆಗನಿಗೆ ತೋರಿಸಿದಳು.

"ಇವು ಇದ್ದಿರಲಿಲ್ಲವಾದರೆ ನೃತ್ಯಹೀನವ ನನ್ನ ಬೆನ್ನು ಕತ್ತಿಗಾವವೆಂಬುದನ್ನು ಅವರು ಅರಿತಿರದಿದ್ದರೆ ನನ್ನನ್ನು ಉಚ್ಚಾಟಿಸಿ ಕೊಟ್ಟು ರಂಗಭೂಮಿಯಿಂದ ಓಡಿಸಿಬಿಡುತ್ತಿದ್ದರು. ನನ್ನ ಶಾರೀರ ಸಾಧಾರಣವೆಂಬುದು ನನಗೂ ತಿಳಿದಿದೆ. ಈ ನನ್ನ ಲಾವಣ್ಯದ ಸಹಾಯದಿಂದಲೆ ನಾನು ಪಾರಾಗಬೇಕು. ಇದೂ ನನ್ನಿಂದ ಕಳೆದು ಹೋದ ದಿನ...." ವೆಂಟೆಳು ಸ್ವಲ್ಪ ತಡೆದು ಅಂಗಭಂಗಿಯಿಂದಲೆ ತನ್ನ ಮನೋಗತವನ್ನು ವ್ಯಕ್ತಪಡಿಸಿದಳು.

ಹಾರ್ಟವೆಗನು ಸ್ವಲ್ಪ ಮುಂದೆ ಬಾಗಿ ಅವಳನ್ನು ನಖಶಿಖಾಂತವಾಗಿ ನಿರೀಕ್ಷಿಸಿದನು.

"ಸ್ಟೇನನಿಗಿಂತ ಉತ್ತಮನನ್ನು ನೀನು ಪಡೆಯಬಹುದಾಗಿತ್ತು." ಎಂದು ಹಾರ್ಟವೆಗನು ಕೆಳದನಿಯಲ್ಲಿ ಉಸುರಿದ

ಅವಳು ನಕ್ಕಳಷ್ಟೆ.

"ಸ್ವೀನನು ಇತರರಷ್ಟೆ ನನ್ನ ಬಯಕೆಗಳನ್ನು ಈಡೇರಿಸುತ್ತಾನೆ. ನಿಮ್ಮೆಲ್ಲರಿಗಿಂತ ಅವನು ಉತ್ತಮನೂ ಅಲ್ಲ. ಅಧಮನೂ ಅಲ್ಲ" ಎಂದು ವೆಂಟಳು ಆಡಿದಳು.

"ಆದರೆ ಚೆನ್ನಿ, ನೀನು ಮೋಹನಾಂಗಿಯಾಗಿರುವಿ. ಅಲ್ಲದೆ ತಾರುಣ್ಯದ ದುರ್ದಮ್ಯ ಆಕರ್ಷಕತೆಯು ನಿನ್ನ ರೋಮರೋಮಗಳಲ್ಲಿ ತುಂಬಿದೆ. ನಿನ ಗಾಗಿ ನಿನ್ನ ಸುತ್ತಲೂ ಮುಗಿಬಿದ್ದ ಜನರಲ್ಲಿ ಕೇವಲ ಪ್ರೇಮಕ್ಕಾಗಿ ಸ್ವೀನನ ಹೊಣೆಯನ್ನು ಹೊರಲು ಸಿದ್ಧವಾದವನೊಬ್ಬನಿದ್ದಾನೆ" ಎಂದು ಹಾರ್ಟವೆ ಗನು ಅವಳ ಮಾತಿಗೆ ತನ್ನ ಅಭಿಪ್ರಾಯವನ್ನು ಸೂಚಿಸಿದನು.

ಅವಳ ಕಣ್ಣುಗಳಲ್ಲಿ ತಿರಸ್ಕಾರ, ಬೇಸರಗಳು ಸ್ಪಷ್ಟವಾಗಿ ಮೂಡಿ ದವು.

"ಪ್ರೇಮ, ನನ್ನೆದುರು ಪ್ರೇಮದ ಮಾತೆತ್ತದಿರಿ. ಮನುಷ್ಯನನ್ನು ಮೋಹಿಸುವ ವಯಸ್ಸು ನನಗೆ ಪ್ರಾಪ್ತವಾದಂದಿನಿಂದ ನಾನು ಆ ಶಬ್ದವನ್ನು ಕೇಳುತ್ತಿದ್ದೇನೆ. ಪ್ರೇಮ" ಎಂದು ಅವರು ಅಪಹಾಸ್ಯದ ನಗೆಬೀರಿ "ಅದು ಪುರುಷರ ತುಟಿಗಳ ಮೇಲೆ ಸದಾ ಕುಣಿಯುತ್ತಿರುವುದು. ಗಿಳಿಗಳಂತೆ ನೀವ ದನ್ನು ಉಚ್ಚರಿಸುವಿರಿ. 'ನಾನು ನಿನ್ನನ್ನು ಪ್ರೀತಿಸುತ್ತೇನೆ' ಎಂದು ಬಾಯಿಂದ ನೀವು ಗಟ್ಟಿಸಿ ಹೇಳುತ್ತಿರುವಾಗಲೇ 'ಈ ಕಾಮಿನಿ ಸುಂದರಿ ಯಾಗಿದ್ದಾಳೆ. ಒಂದು ಗಂಟೆಯ ಮಟ್ಟಿಗಾದರೂ ಅವಳು ನನ್ನವಳಾಗ ಬೇಕು. ನಂತರ ಅವಳು ನನ್ನನ್ನು ಆಕರ್ಷಿಸದಿರಬಹುದು. ಆದರೆ ಈ ಕ್ಷಣಕ್ಕೆ ನಾನವಳನ್ನು ಜಗತ್ತಿನಲ್ಲಿಯ ಎಲ್ಲ ವಸ್ತುಗಳಿಗಿಂತ ಹೆಚ್ಚು ಉತ್ಕಟತೆಯಿಂದ ಪ್ರೀತಿಸುತ್ತೇನೆ.' ಎಂಬ ವಿಚಾರಗಳು ನಿಮ್ಮ ಮನಸ್ಸಿನಲ್ಲಿ ತಾಂಡವವಾಡು ತ್ತಿವೆ. ಈ ವಾಸನೆಯನ್ನು ನಮ್ಮೆದುರು ಒಮ್ಮೆಲೇ ಹೇಳಲು ನೀವು ಸಂಕೋ ಚಗೊಳ್ಳುವದರಿಂದ ಅದನ್ನಡಗಿಸಲು ಸುಂದರವಾಗಿಸಲು ಅದಕ್ಕೆ ಪ್ರೇಮದ ಹೊದಿಕೆ ಹೊಚ್ಚುತ್ತೀರಿ. ನಮ್ಮಲ್ಲಿಯ ಕೆಲವು ತಿಳಿಗೆಟ್ಟ ಹೆಣ್ಣುಗಳು ನಿಮ್ಮ ಮಾತನ್ನು ನಂಬುತ್ತವೆ. ಇದೆಲ್ಲದರ ಅರ್ಥವೇನು? ಮಾನವಜನಾಂಗ ವನ್ನು ಬೆಳೆಸುವ ತನ್ನ ಯೋಜನೆಯನ್ನು ಯಶಸ್ವಿಯಾಗಿಸುವದಕ್ಕಾಗಿ ಪ್ರಕೃ

ತಿಯು ಮಾನಿನಿಯರನ್ನು ವಂಚಿಸುವದಕ್ಕಾಗಿ ಉಪಯೋಗಿಸುವ ಅನೇಕ ಕುಟಿಲ ತಂತ್ರಗಳಲ್ಲಿ ಇದೂ ಒಂದು!" ಎಂದು ಆವೇಶದಿಂದ ಆಡಿದಳು.

ಮೇಜರ ಹಾರ್ಟವೇಗನು ಹಲ್ಲುಕಿರಿದ.

"ನೀನು ಸ್ವತಂತ್ರ ವಿಚಾರದವಳಿದ್ದೀ ವೆಂಟ್ಸ,ಆದರೆ ಪುರುಷವರ್ಗವನ್ನು ಮಾತ್ರ ಕಠೋರತೆಯಿಂದ ಕಾಣುತ್ತಿರುವಿ. ನೀನು ಹೀಗೆ ಮಾಡಬೇಕಾದರೆ ಹಿಂದಕ್ಕೊಮ್ಮೆ ನೀನು ಯಾರನ್ನೊ ಅತ್ಯುತ್ಕಟವಾಗಿ ಪ್ರೀತಿಸಿ ಪ್ರೇಮಭಂಗ ಹೊಂದಿರಬೇಕು." ಎಂದಾಡಿದ ಹಾರ್ಟವೆಗ.

"ಈ ವಿಷಯದಲ್ಲಿ ನಿಮ್ಮ ಮನಶ್ಶಾಸ್ತ್ರ ನಿಮ್ಮನ್ನು ವಂಚಿಸಿತು ಹಾರ್ಟವೇಗ" ಎಂದು ನುಡಿದು ವೆಂಟಳು ಮೇಜರನನ್ನು ಮೂದಲಿಕೆಯ ನೋಟದಿಂದ ದಿಟ್ಟಿಸಿದಳು.

"ನನ್ನನ್ನು ವಂಚಿಸಲೆಳಸಿದ ಈ ಸುಕುಮಾರ 'ಭಾವವನ್ನು ನಾನು ಅನೇಕಸಲ ಕಂಡಿದ್ದೇನೆ.ಆದರೆಂದೂ ವಂಚಿತಳಾಗಿಲ್ಲ.ನನ್ನ ತಂದೆಯು ನನ್ನ ತಾಯಿಯನ್ನು ತನ್ನೆರಡು ಪುಟ್ಟಬಾಲಕರೊಡನೆ ಪ್ಯಾರಿಸದ ಬೀದಿಯಲ್ಲಿ ತಿರುಕಿಯಂತೆ ತಿರುಗುವ ಪರಿಸ್ಥಿತಿಗೆ ತಂದು ಮುಟ್ಟಿಸುವಂತೆ ಪ್ರೀತಿಸಿದ. ಜನರು ನನ್ನ ಲಾವಣ್ಯಕ್ಕೆ ಮನಸೋತು ಹೋಗಿದ್ದಾರೆ. ಆದರೆ ನನ್ನ ತಂಗಿಯು ನನಗಿಂತ ಚಲುವೆಯಾಗಿದ್ದಳು. ಮ್ಯೂನಿಕದಲ್ಲಿ ಒಬ್ಬನು ಅವಳನ್ನು ಪ್ರೀತಿಸಿದ ಕಳೆದತಿಂಗಳು ಅವಳು ವಿಯನ್ನಾದ ಆಸ್ಪತ್ರೆಯಲ್ಲಿ ಮರಣಹೊಂದಿದಳು. ಅವಳನ್ನುಪಚರಿಸುತ್ತಿದ್ದ ದಾದಿಯರು ಕೂಡ ಹೇಸಿಗೊಂಡು ದೂರ ಓಡಿಹೋಗುವಷ್ಟು ಅವಳ ದೇಹ ಕೆಟ್ಟು ಹೋಗಿತ್ತು. ಹಾರ್ಟವೆಗ, ನಾನೆಂದಿಗೂ ಪ್ರೀತಿಸಿಲ್ಲ. ಸದಾ ದ್ವೇಷಿಸುತ್ತಿದ್ದೇನೆ." ಎಂದು ಮಾತು ಮುಗಿಸಿ ಅವಳು ಹೊರಳಿದಳು. ಅದೇ ಬಂದ ಸ್ಟೀನನು ಅವಳನ್ನು ಹರಟೆಗೆ ಎಳೆಯುತ್ತಿದ್ದ.

"ಬರ್ಲಿನರಬ್ಲಾ ಮತ್ತು ಫ್ರೀಜರು ನನ್ನನ್ನು ಈಗ ಊಟಕ್ಕೆ ಕರೆದಿದ್ದಾರೆ.ಔತಣವನ್ನು ಸ್ವೀಕರಿಸುವದಿಲ್ಲವೇ? ಮೇಜರ ಹಾರ್ಟವೆಗನೂ ನಮ್ಮೊಡನೆ ಬಂದರೆ ಅವರಿಗೆ ಸಂತೋಷವಾಗದಿರದು." ಎಂದು ಸ್ಟೀನನು ವೆಂಟಳನ್ನು ಮುಗುಳ್ನಗೆಯಿಂದ ಕೇಳುತ್ತಿದ್ದ.

ಹಾರ್ಟವೆಗನು ಅವಳನ್ನು ಕಡೆಗಣ್ಣಿನಿಂದ ನೋಡಿದ. ಒಂದು ನಿಮಿಷದ ಪೂರ್ವದಲ್ಲಿ ಅವಳ ಮುಖಲಾವಣ್ಯವನ್ನು ಕೆಡಿಸಿದ್ದ ತಿರಸ್ಕಾರದ ಅತಿ ಆವೇಶದ ಗುರುತೂ ಅಲ್ಲಿರಲಿಲ್ಲ. ಅವಳು ಶಾಂತ ಸುಂದರಿಯಾಗಿದ್ದಳು. ಸ್ವಭಾವ ಸಿದ್ಧವಾದ ಅನಾಸಕ್ತಿಯಿಂದ ಸುತ್ತಲಿನ ನೋಟವನ್ನು ನಿರುಕಿಸುತ್ತಿದ್ದಳು.

"ಉಪಕೃತನಾಗಿದ್ದೇನೆ. ನಾನು ನಿಮ್ಮೊಡನೆ ಭೋಜನಕ್ಕೆ ಬರುವೆನು" ಎಂದು ಹಾರ್ಟವೆಗನು ನುಡಿದು ಅವಳ ಅವಲಂಬನೆಗಾಗಿ ತನ್ನ ತೋಳು ಚಾಚಿದನು.

೫

ವಾನ ಹಾರ್ಟವೆಗನು ಮೂರು ವಾರಗಳ ನಂತರ ಲೊಟ್ಟಾವೆಂಟಳ ಮನೆಗೆ ಹೋದನು. ಅವನನ್ನು ಬರಮಾಡಿಕೊಂಡು ಸಿಂಗರಿಸಿದ ದಿವಾಣಖಾನೆಯಲ್ಲಿ ಕುಳ್ಳಿರಿಸಿದ ದಾಸಿಯು ಅವನ ಆಗಮನವನ್ನು ತನ್ನ ಒಡತಿಗೆ ತಿಳಿಸಹೋಗಿದ್ದಳು. ದಿವಾನಖಾನೆಯನ್ನು ಸಿಂಗರಿಸುವಾಗ ಸ್ಟೀನನ ಹಣಕ್ಕೆಷ್ಟು ಚಕ್ರ ಬಿತ್ತೆಂಬುದನ್ನು ಊಹಿಸುವುದು ಕಠಿಣ. ಆದರೂ ಈ ದಿವಾನಖಾನೆಯನ್ನು ಭಿನ್ನ ಅಭಿರುಚಿಯ ಇಬ್ಬರು ಮೂವರು ಸೇರಿ ಅಲಂಕರಿಸಿದಂತಿತ್ತು. ಸುವಿಖ್ಯಾತ ಕಲಾವಿದರ ಉತ್ತಮೋತ್ತಮ ಚಿತ್ರಪಟಗಳ ಮಗ್ಗುಲಲ್ಲಿಯೇ ಹೀನಅಭಿರುಚಿಗೆ ತಕ್ಕ ಚಿಕ್ಕ ಚಿತ್ರಗಳನ್ನು ತೂಗಹಾಕಿದ್ದರು. ಸ್ವಭಾವ ಸುಂದರವಾದ ನೈಸರ್ಗಿಕ ದೃಶ್ಯದೊಂದಿಗೆ ಭೌತಿಕ ಕಾರಖಾನೆಗಳ ಚಿತ್ರಗಳನ್ನು ಕಾಣಬಹುದಾಗಿತ್ತು. ಆದರೆ ಮೋಜರ ಹಾರ್ಟವೆಗನ ಮನಸ್ಸನ್ನು ಸೆರೆಹಿಡಿದ ಮೂರು ಚಿತ್ರಗಳು ಪೂರ್ವದೇಶಗಳಿಗೆ ಸಂಬಂಧಿಸಿದ ಚಿತ್ರಗಳಾಗಿದ್ದವು.

ಆ ಚಿತ್ರಪಟಗಳಲ್ಲಿ ಪ್ರದರ್ಶಿಸಿದ ಹಿಂಸೆಯ ಭೀಕರತೆಯನ್ನು ಕಂಡು ಹಾರ್ಟವೆಗನೂ ನಡುಗಿದ. ನುರಿತ ಕುಂಚದಿಂದಿಳಿದು ಬಂದ ಕಲಾಕೃತಿಗಳಾಗಿದ್ದವು ಅವು. ಮೊದಲನೆಯ ಚಿತ್ರದಲ್ಲಿ ಧ್ವನಿಯಿಂದುಂಟು ಮಾಡಿ

ಬಹುದಾದ ಪೀಡೆಯನ್ನು ಪ್ರದರ್ಶಿಸಲಾಗಿತ್ತು. ಎರಡನೆಯ ಚಿತ್ರದಲ್ಲಿ, ಒಬ್ಬ ಮನುಷ್ಯನ ತೊಗಲನ್ನು ಕತ್ತಿನವರೆಗೆ ಸುಲಿದು ಅದನ್ನು ಅವನೇ ಹೊತ್ತುಕೊಂಡು ನಡೆಯುವಂತೆ ಹಿಂಸಿಸಲಾಗಿತ್ತು. ಮೂರನೆಯದರಲ್ಲಿ ಸುಖಪೀಡೆಯನ್ನು ಚಿತ್ರಿಸಲಾಗಿತ್ತು. ಈ ಚಿತ್ರಹಿಂಸೆಗೆ ಗುರಿಯಾದವನ ಮುಖದಲ್ಲಿ ಚಿತ್ರಕಾರನು ಕಾಮುಕತೆಯನ್ನೂ ನೋವನ್ನೂ ತೀರ ಚಾತುರ್ಯದಿಂದ ವ್ಯಕ್ತಪಡಿಸಿದ್ದನು. ಆ ಚಿತ್ರಿತ ವ್ಯಕ್ತಿಯ ಮುಖದಲ್ಲಿ ಅಷ್ಟೇ ಏಕೆ ನರನರಗಳಲ್ಲಿಯೂ ಕಾಮುಕತೆ ತುಂಬಿ ತುಳುಕುತ್ತಿತ್ತು. ಹಿಂಬದಿಯಲ್ಲಿ ಶ್ಯಾಮಾಂಬರಧಾರಿಣಿಯಾದ ಸ್ತ್ರೀಯೊಬ್ಬಳು ಪರಪೀಡನೆಯಿಂದುಂಟಾಗುವ ಆನಂದವನ್ನು ತೋರ್ಪಡಿಸುತ್ತ ತನ್ನ ಕಾರ್ಯದ ಎಣಿಕೆ ಹಾಕುತ್ತ ನಿಂತಿದ್ದಳು.

ಹಾರ್ಟವೆಗನು ಇನ್ನು ಆ ಚಿತ್ರಗಳನ್ನು ನೋಡುತ್ತಿದ್ದಂತೆ ಲೊಟ್ಟಾವೆಂಟಳು ಪ್ರವೇಶಿಸಿ ತನ್ನನ್ನು ಗಮನಿಸದ ಹಾರ್ಟವೆಗನ ಕಡೆಗೆ ಉಪಹಾಸದ ನಗೆ ಬೀರಿ " ನನ್ನ ಚಿತ್ರಗಳನ್ನು ಮೆಚ್ಚಿದಿರಾ ? " ಎಂದಳು.

"ಮೆಚ್ಚಿದೆಯೆಂದು ಹೇಳಿದರೆ ಅನ್ಯಾಯವಾದೀತಲ್ಲವೆ ? ನಾನು ಅವುಗಳಿಂದ ಮೋಹಿತನೇ ಆಗಿದ್ದೇನೆ. ಆದರೆ ನಿನ್ನಂಥ ಲಾವಣ್ಯವತಿಯು ಇಂಥ ಚಿತ್ರಹಿಂಸೆಯ ಚಿತ್ರಗಳನ್ನು ಪ್ರದರ್ಶಿಸಿ ಪಡೆಯಬಹುದಾದ ಆನಂದವೇನೊ ತಿಳಿಯದಾಗಿದೆ." ಎಂದು ಹಾರ್ಟವೆಗನು ಅವಳ ಕೈಯನ್ನು ಅಮುಕಿದನು

"ನಿಮಗದು ಗೊತ್ತಾಗಲಿಕ್ಕಿಲ್ಲ. ಮೂರೇ ವಾರಗಳ ಪರಿಚಯ ಪಡೆದ ನೀವು ಇಂಥ ಚಿತ್ರಗಳು ನನ್ನನ್ನು ಆಕರ್ಷಿಸುತ್ತಿವೆಂಬುದನ್ನು ಅರಿಯದಿರಬಹುದು. ಆದರೆ ಆ ಚಿತ್ರದಲ್ಲಿಯ ಶ್ಯಾಮಾಂಬರಧಾರಿಣಿಯಾಗಬೇಕೆಂದು ಇಚ್ಛಿಸಿದ್ದೇನೆ. ತಮ್ಮ ಸರ್ವಸ್ವವನ್ನೂ ಹಾಳುಮಾಡಿಕೊಂಡು ಪುರುಷರು ಪಡೆಯಲು ಹಾರೈಸುತ್ತಿರುವ ಸುಖವನ್ನೇ ಅವರಿಗೊದಗಿಸಿ ಕೊಟ್ಟು ಅವರ ಸಂಹಾರ ಮಾಡುವದೇ ನನ್ನ ಇಚ್ಛೆಯಾಗಿದೆ. ಇದರಿಂದ ಪುರುಷರು ಸ್ತ್ರೀಸಮಾಜಕ್ಕೆ ಮಾಡುವ ಅನ್ಯಾಯದ ಕೆಲವು ಭಾಗದ ಸೇಡನ್ನು ತೀರಿಸಿಕೊಂಡಂತಾದೀತು."

"ನಿನ್ನ ತಾರುಣ್ಯ ಲಾವಣ್ಯಗಳನ್ನು ನೋಡಿದರೆ ನಿನ್ನ ವಿಚಾರಗಳು ವಿಪರೀತವಾಗಿವೆಂದೇ ಹೇಳಬೇಕಾಗುವದು. ನಿನ್ನಲ್ಲಿ ಅಸಾಮಾನ್ಯವಾದು ದೇನೋ ಇದೆ." ಎಂದು ಹಾರ್ಟವೆಗನು ಅವಳನ್ನು ಆಸ್ಥೆಯಿಂದ ದಿಟ್ಟಿ ಸುತ್ತ ಹೇಳಿದನು

"ಸ್ತ್ರೀಯ ಸಹಜ ಭಾವನೆಯೇನು ಎಂಬುದು ನಿಮಗೆ ತಿಳಿದಿದಿಯೇ ?" ಎಂದವಳು ಮುಗುಳ್ನಗೆ ಸೂಸಿದಳು. "ತಾಯ್ತನವೆ ಅವಳ ಸಹಜವಾದ ಆಕಾಂಕ್ಷೆ. ನನ್ನಂಥವಳ ಸಹಜವಾದ ಆಕಾಂಕ್ಷೆ. ನನ್ನಂಥವಳ ಬಾಯಿಂದ ಈ ಮಾತು ಕೇಳಿ ನಿಮಗಚ್ಚರಿಯಾಯಿತಲ್ಲವೇ ? ನೀವು ಜಗತ್ತನ್ನು ಸ್ವಲ್ಪ ಪರೀಕ್ಷಿಸಿದರೆ ಸ್ತ್ರೀಯು ತನ್ನ ಗಂಡನಿಗಿಂತ ತನ್ನ ಮಗುವನ್ನೆ ಹೆಚ್ಚಾಗಿ ಪ್ರೀತಿಸುತ್ತಾಳೆಂಬದು ನಿಮಗೆ ಗೋಚರವಾಗದಿರದು. ನನ್ನ ಮಾತು ಸರಿ ಯೆಂದು ನೀವು ಒಪ್ಪಲೇಬೇಕಾಗುವದು. ತನ್ನ ಗಂಡನು ಆಹತನಾಗಿ ಬಿದ್ದಾಗಅವನಿಗಾಗಿ ಹೋರಾಡುವ ಸ್ತ್ರೀಯನ್ನು ಕಾಣಬಹುದೇ? ಆದರೆ ಅದೇ ಸ್ತ್ರೀಯು ತನ್ನ ಕಂದಮ್ಮನ ಸಲುವಾಗಿ ಪ್ರಾಣಾಂತ್ಯದವರೆಗೂ ಹೋರಾಡು ವಳು. ಈ ವಿಷಯ ನಿಮಗೆ ಅಷ್ಟು ಸೇರಲಿಕ್ಕಿಲ್ಲ. ಇಲ್ಲಿ ಕುಳಿತುಕೊಳ್ಳುವ. ಹೊಸ ವಿಚಾರವೇನಾದರೂ ಇದೆಯೇ ? ಇಂದು ಪತ್ರಿಕೆಗಳನ್ನು ಓದಲೂ ಸಮಯ ದೊರೆಯಲಿಲ್ಲ. ಇಷ್ಟರಲ್ಲಿಯೆ ಕಾಫಿ ಬರುವದು." ಎಂದು ಅವಳು ಕೋಣೆಯ ಒಂದು ಮೂಲೆಯಲ್ಲಿದ್ದ ಕರೆಗಂಟೆಯ ವಿದ್ಯುತ್ ಗುಂಡಿಯನ್ನು ಒತ್ತಿದಳು.

ಹಾರ್ಟವೆಗನು ಆರಾಮಾಸನದಲ್ಲಿ ವಿಶ್ರಮಿಸಿದನು. ವೆಂಟಳು ಮಂಚದ ಮೇಲೆ ದಿಂಬಿಗೆ ಅತು ಒರಗಿಕೊಂಡಳು. ಹಾರ್ಟವೆಗನು ತನ್ನ ಆರಾಮಾಸನ ವನ್ನು ಇನ್ನೂ ಅವಳ ಸಮೀಪಕ್ಕೆ ಎಳೆದನು.

"ನಾನೀಗ ಬಂದದ್ದು ಏಕೆ ನಿನಗೆ ಗೊತ್ತೆ ?" ಎಂದು ಪ್ರಶ್ನಿಸಿದ.

ಇಲ್ಲವೆಂದು ಕೊರಳು ಕೊಂಕಿಸಿದಳು.

"ನಿಮ್ಮ ಆಗಮನದ ಕಾರಣ ಕೇಳಲು ನನಗೆ ಇದುವರೆಗೂ ಅವಕಾ ಶವೇ ದೊರೆಯಲಿಲ್ಲ. ನಾನು ಇಷ್ಟೆಲ್ಲ ಹೇಳಿದ ನಂತರ ನನ್ನನ್ನು ಪ್ರೀತಿ ಸುವ ಧಾಷ್ಟ್ಯ್ರದಿಂದ ನೀವಿಲ್ಲಿಗೆ ಬಂದಿರುವಿಯೆಂದು ನನಗೆ ಅನಿಸುವುದಿಲ್ಲ" ಎಂದು ಫಕ್ಕಳು.

" ಈಗ. ನಾನು ನಿನ್ನನ್ನು ಪ್ರೀತಿಸಲು ಬಂದಿಲ್ಲ. ಆದರೆ........" ಎಂದು ಅವನು ನಡುವೆ ಮಾತು ನಿಲ್ಲಿಸಿ ಪುನಃ ಅಸಂಬದ್ಧವಾಗಿ ಹೇಳತೊಡಗಿದ.

" ಯಾರಾದರೂ ನಿನಗೆ ಇಷ್ಟು ಅದೇಕೆ ಇದಕ್ಕೂ ಎಷ್ಟೋ ಪಟ್ಟು ಹೆಚ್ಚು ಆಸ್ತಿಯನ್ನು ಕೊಟ್ಟು ಪುರುಷ ಸಹಜವಾದ ಬೇಡಿಕೆಯನ್ನು ನಿನಗೆ ಮಾಡದಿದ್ದರೆ ನೀನು ಸ್ಟೀನನನ್ನು ಬಿಟ್ಟುಗೊಡಬಲ್ಲೆಯಾ ? "

" ಅದಿಲ್ಲದಿದ್ದರೆ ಮತ್ತೇನನ್ನಾದರೂ ನಾನು ಕೊಡಬೇಕಾಗಬಹುದು ? ಏನನ್ನೂ ಬಯಸದೆ ದಾನ ಮಾಡುವಷ್ಟು ಮೂರ್ಖರಲ್ಲ ಪುರುಷರು. ನಾನು ಏನನ್ನು ಕೊಡಬೇಕಾಗುವುದು ಎಂಬುದನ್ನು ಹೇಳಿಬಿಡಬಾರದೆ ? " ಎಂದವಳು ಧೂರ್ತತನದಿಂದ ಕೇಳಿದಳು.

ಹಾರ್ಟವೆಗನು ಕೆಲ ನಿಮಿಷ ಮೌನವಾಗಿದ್ದನು.

" ತಾಯ್ತನವೇ ಸ್ತ್ರೀಯ ಸಹಜ ಭಾವನೆಯೆಂದು ನೀನು ಇದೀಗ ಹೇಳಿರುವುದರಿಂದ ನನ್ನ ಕಾರ್ಯ ಸುಗಮವಾಗಿದೆ. ನೀನು ತಾಯಿಯಾಗ ಲೆಂದೇ ಹುಟ್ಟಿದವಳು ಎಂಬ ವಿಚಾರವೇನಾದರೂ ನಿನ್ನಲ್ಲಿ ಸುಳಿದಿ ದೆಯೋ ? "

" ಇಂಥ ವಿಚಾರವೆ ? ಈ ಪ್ರತಿಫಲ ಕೊಡಬೇಕಾಗುವದೆಂದು ನೀವು ಕೇಳುವಿರಿ ಎಂದು ಭಾವಿಸಿದ್ದೆ. ಸಾಕು. ನಾನು ಸ್ಟೀನನನ್ನು ಬಿಟ್ಟು ಬರ ಲಾರೆ " ಎಂದು ನಗೆಯಿಂದಲೇ ತಿರಸ್ಕಾರವನ್ನು ಸೂಚಿಸಿದಳು.

" ನಿನ್ನ ಕಲ್ಪನೆ ತಪ್ಪಾಗಿದೆ. ನಾನು ಹಾಗೆ ಹೇಳಿದ್ದು ಸರಿ. ನೀನು ನನ್ನ ಕೊಡುಗೆಯನ್ನು ಸ್ವೀಕರಿಸಿದರೆ ಯಾರ ಭೋಗಿನಿಯೂ ಆಗಬೇಕಾಗಿಲ್ಲ. ಆದರೆ ತಾಯ್ತನವನ್ನು ಮಾತ್ರ ಹೊಂದಬಲ್ಲೆ" ಎಂದು ಹಾರ್ಟವೆಗನು ಉತ್ತ ರಿಸಿದ.

ದಿಂಬಿಗೆ ಒರಗಿಕೊಂಡಿದ್ದ ಲೊಟ್ಟಾವೆಂಟಳು ಎದ್ದು ಕುಳಿತು ಅವನನ್ನು ನಿರುಕಿಸಿ ನೋಡಹತ್ತಿದಳು.

" ಅಯ್ಯೋ ಮೇಜರರೆ? ಯುದ್ಧದಿಂದ ನಿಮ್ಮ ತಲೆ ತಿರುಗಿದೆಯೋ ಒಮ್ಮೆಲೆ ನಿಮಗೆ ಹುಚ್ಚು ಹಿಡಿಯಿತೆ " ?

ಇಲ್ಲವೆಂದು ಹಾರ್ಟವೆಗನು ನಗುತ್ತ ಉತ್ತರಿಸಿದ. "ನಾನು ಹುಚ್ಚ ನಲ್ಲ. ನಾನು ಹೇಳುವುದನ್ನು ಕೇಳು." ಎಂಬು ಅವನು ಮುಂಪೆ ಬಾಗಿ ವೆಂಟಳ ಕಿವಿಯಲ್ಲಿ ಕೆಳದನಿಯಲ್ಲಿ ಆತುರದಿಂದ ಏನನ್ನೋ ಹೇಳ ತೊಡಗಿದ.

ವೆಂಟಳು ಅವನ ಮಾತುಗಳನ್ನು ಕೇಳುತ್ತಿದ್ದಂತೆ ಆಗಾಗ ಅವಳ ಮುಖದಲ್ಲಿ ಹೆದರಿಕೆ ಅವಿಶ್ವಾಸಗಳ ಭಾವನೆ ವ್ಯಕ್ತವಾಗುತ್ತಿತ್ತು. ಅವ ನೊಬ್ಬ ಹೇಸಿ ವ್ಯಕ್ತಿ ಎಂದು ಅವಳು ಇದ್ದಕ್ಕಿದ್ದಂತೆ ಹಿಂಪೆ ಸರಿದು ಕೊಂಡಳು. ಅವನ ಮಾತು ಮುಗಿದಕೂಡಲೆ ಅವಳು ಪುಟಿಪೆದ್ದು "ಇಲ್ಲ. ಇಲ್ಲ. ನಿಮ್ಮ ಸೂಚನೆ ಅಸಾಧ್ಯವಾದುದು" ಎಂದಳು.

ಹಾರ್ಟವೆಗನು ಸಿಗರೇಟು ಹೊತ್ತಿಸಿದ.

"ಈಗಲೇ ನಿನ್ನ ನಿರ್ಧಾರ ತಿಳಿಸಬೇಕೆಂದು ನಾನು ಬೇಡುವದಿಲ್ಲ! ವಿಚಾರಮಾಡಲು ಅವಕಾಶ ಕೊಡುತ್ತೇನೆ. ನನ್ನ ಕೆಲಸ—ಪ್ರಯೋಗವು ಪೂರೈಸಿತೆಂದರೆ ನಿನ್ನಿಷ್ಟದಂತೆ ನೀನು ಜೀವನ ನಡೆಸಬಹುದು. ಆಗ ನೀನು ಯಾರ ಹಂಗಿಗೂ ಒಳಗಾಗಬೇಕಾಗಿಲ್ಲ. ಸಿರಿವಂತಿಕೆಯಲ್ಲಿಯೇ ನೀನು ಉಳಿದ ಆಯುಷ್ಯವನ್ನು ಕಳೆಯಬಹುದು."

"ನಾನು ವಿಚಾರಿಸಬೇಕು. ಕೂಡಲೆ ಉತ್ತರ ಕೊಡುವುದು ಸಾಧ್ಯ ವಿಲ್ಲ" ಎಂದು ಅವಳು ತನ್ನ ಮುಖವನ್ನು ಕೈಯಿಂದ ಮುಚ್ಚಿಕೊಂಡಳು.

"ವೆಂಟ ನಾನು ನಿನಗೆ ವಿಚಾರ ಮಾಡಲು ಒಂದು ವಾರ ಅವಕಾಶ ಕೊಡುತ್ತೇನೆ ಅಷ್ಟರೊಳಗಾಗಿಯೇ ನಿನ್ನ ನಿರ್ಧಾರವಾದರೆ ನನಗೆ ಹೇಳಿ ಕಳಿಸು,ನೀನು ಒಪ್ಪಿಕೊಂಡರೆ ನಿನಗೆ ದೊರೆಯಬಹುದಾದ ಸುಖಸೌಕರ್ಯ ಗಳನ್ನು ನೆನೆದುಕೊಳ್ಳು. ಒಪ್ಪದಿದ್ದರೆ ನಿನ್ನ ತಾರುಣ್ಯದ ಅಬ್ಬರವಿರುವವರೆಗೆ ಚೆಲ್ಲಾಟ ನಡೆಸಬಹುದು, ನಂತರ ಪುನಃ ಬೀದಿ ಪಾಲಾಗುವುದು ತಪ್ಪಿ ದ್ದಲ್ಲ." ಎಂದು ಅವನೂ ಎದ್ದುನಿಂತನು.

ಅವನು ಈ ಮಾತುಗಳನ್ನು ಹೇಳುತ್ತಿರುವಾಗ ವೆಂಟಳು ತನ್ನಲ್ಲಿ ಉಂಟಾಗಿದ್ದ ಹೆದರಿಕೆಯನ್ನು ಕಳೆದುಕೊಂಡು ಸ್ವಲ್ಪ ಚೇತರಿಸಿಕೊಂಡಿದ್ದಳು.

" ನಾನು ಒಪ್ಪಿದೆ ಎಂದು ಭಾವಿಸಿದರೆ-ನೀವು ನಿಮ್ಮ ಕರಾರನ್ನು ಪೂರೈಸುವಿರೆಂದು ಹೇಗೆ ನಂಬಬೇಕು. ? " ಎಂದು ಅವಳು ಪ್ರಶ್ನಿಸಿದಳು.

ಹಾರ್ಟವೆಗನು ನಕ್ಕನು. ತನಗೇ ಜಯ ದೊರೆಯುತ್ತಿದೆಂದು ಅವನು ಕಂಡುಕೊಂಡ.

" ಪ್ರಯೋಗವು ನಡೆಯುವ ದಿನವೆ ನಿನ್ನ ಹೆಸರಿನಲ್ಲಿ ಬ್ಯಾಂಕಿನಲ್ಲಿ ಹಣವನ್ನು ಇಡಲಾಗುವುದು. ನಿನ್ನ ವೇಳೆಯನ್ನು ನಾನಿನ್ನು ಹೆಚ್ಚಿಗೆ ಹಾಳು ಮಾಡಲಾರೆ. " ಎಂದು ಅವನು ತನ್ನ ಕೈ ಚಾಚಿದ. ವೆಂಟಳು ಅವನ ಕೈ ಕುಲುಕಿಸಿದಳು.

" ಒಳ್ಳೇದು ಇನ್ನು ಒಂದು ವಾರದ ಅವಧಿ ನಿನಗಿದೆ. ನಾವು ಬೇಗನೆ ಭೆಟ್ಟಿಯಾಗಬಹುದೆಂಬ ಆಶೆ ನನಗಿದೆ " ಎಂದು ನುಡಿಯುತ್ತ ಅವನು ಹೊರಟುಹೋದನು. ಅವನ ಬೆನ್ನ ಹಿಂದೆಯೇ ಬಾಗಿಲು ಮುಚ್ಚಿತು ವೆಂಟಳು ಶೂನ್ಯ ದೃಷ್ಟಿಯಿಂದ ಕಿಟಕಿಯ ಹತ್ತಿರ ನಿಂತಳು.

ಮೂರು ದಿನಗಳ ನಂತರ ಮೇಜರ ಹಾರ್ಟವೆಗನು ಮನೆಗೆ ಹಿಂತಿರುಗಿದಾಗ ಅವನ ಸೇವಕನೊಬ್ಬನು ಬೆಳ್ಳಿಯ ತಟ್ಟೆಯಲ್ಲಿ ಒಂದು ಪಾಕೀಟನ್ನು ತಂದಿತ್ತನು,

" ಒಬ್ಬ ದಾಸಿಯು ಇದನ್ನು ಒಂದು ತಾಸಿನ ಹಿಂದೆ ಕೊಟ್ಟು ಹೋದಳು. ನಿಮಗೆ ಕೂಡಲೆ ಮುಟ್ಟಿಸಬೇಕೆಂದು ತಿಳಿಸಿದ್ದಾಳೆ " ಎಂದ ಅಳು ತಿಳಿಸಿದ.

ಹಾರ್ಟವೆಗನು ಪಾಕೀಟನ್ನು ಎತ್ತಿಕೊಂಡ. ಮೃದು ಮಧುರ ಸುಗಂಧವನ್ನು ಬೀರುತ್ತಿದ್ದ. ಆದರ ಮೇಲಿನ ಹಸ್ತಾಕ್ಷರ ಅವನಿಗೆ ಅಪರಿಚಿತವಾದ್ದಿತ್ತು. ಆದರೆ ಅದರ ಸುಗಂಧದಿಂದ ಅವನಿಗೆ ವೆಂಟಳ ನೆನಪು ಬಂತು, ಉತ್ಕಂಠೆಯಿಂದ ಅದನ್ನು ಒಡೆದು ನೋಡಿದ. ಒಳಗಿದ್ದ ಕಾಗದದ ತುಂಡಿನ ಮೇಲೆ ಎರಡೇ ಎರಡು ಶಬ್ದಗಳನ್ನು ಗೀಚಲಾಗಿತ್ತು.

" ನಾನು ಒಪ್ಪಿದ್ದೇನೆ. "

೬

ಮೇಲೆ ಹೇಳಿದ ಘಟನೆ ಸಂಭವಿಸಿದ ಎರಡು ವಾರಗಳ ನಂತರ ಹಾರ್ಟ್ವೆಗನು ಹಾರಬರ್ಗ್ದಲ್ಲಿ ಲೊಟ್ಟಾವೆಂಟಳಿಗಾಗಿ ಕೊಂಡಿಟ್ಟಿದ್ದ ಪ್ರಾಸಾದಕ್ಕೆ ಅವಳು ಆಗಮಿಸಿದಳು. ಸ್ಟೀನನೊಡನೆ ಎಷ್ಟೋ ಸಲ ವಾಗ್ಯುದ್ಧವನು ಹೂಡಿ ಅವಳು ಅವನ ಸಂಬಂಧನನ್ನು ಕಡಿದುಕೊಳ್ಳಬೇಕಾಯಿತು. ಯಾವ್ದ ಕಾರಣವಿಲ್ಲದೆ ಇಷ್ಟು ಆಸ್ತಿಯನ್ನು, ಇಷ್ಟೊಂದು ಸೌಭಾಗ್ಯವನ್ನು ಬಿಟ್ಟು ಕೊಟ್ಟು ಹೊರಹೊರಟ ವೆಂಟಳ ದುರಾಸೆಯು ಇಲ್ಲವೆ ವಂಚನೆಯ ಅರ್ಥವೇ ಅವನಿಗಾಗಲಿಲ್ಲ, ಬರ್ಲಿನದ ಜೀವನ ತನಗೆ ಅಸಹ್ಯವಾಗಿದೆ. ವಿಶ್ರಾಂತಿ ಬೇಕು ಎಂದಿಷ್ಟೇ ಅವಳು ಹೇಳುತ್ತಿದ್ದಳು. ತಾನಾದರೂ ಅವಳನ್ನು ಹಿಂಬಾಲಿಸಬಹುದೆ ಎಂದು ಸ್ಟೀನನು ಅಂಗಲಾಚಿ ಬೇಡಿಕೊಂಡರೂ ಅವಳು ಅನುಮತಿಕೊಡಲಿಲ್ಲ. ಇದರಿಂದ ಅವನಿಗೆ ಇನ್ನೂ ಆಶ್ಚರ್ಯವಾಯಿತು. ವೆಂಟಳು ಬೇರೊಬ್ಬನನ್ನು ತನ್ನ ಬಲೆಗೆ ಹಾಕಿಕೊಂಡಿರಬೇಕೆಂದು ಮೊದಲು ಅವನಲ್ಲಿ ಮತ್ಸರ ಅಂಕುರಿಸಿತು. ಆದರೆ ವೆಂಟಳಂಥವಳು ತಾನೊದಗಿಸಿದ ಸಂಪತ್ತು, ಸೌಕರ್ಯಗಳನ್ನೆಲ್ಲ ಕೇವಲ ದುರಾಸೆಯಿಂದ ತ್ಯಜಿಸುವಂಥವಳಲ್ಲವೆಂದು ಅವನಿಗೆ ಹೊಳೆಯಿತು. ತನ್ನಂಥ ಸಿರಿವಂತರು ಆಗಿನ ದಿನದಲ್ಲಿ ದುರ್ಲಭರಾಗಿದ್ದರು ಎಂಬುದನ್ನು ಅವನು ಅರಿತಿದ್ದ. ಆದ್ದರಿಂದ ಅವಳು ಹೇಳುವಂತೆ ಅವಳ ಆರೋಗ್ಯವೇ ಸರಿಯಾಗಿಲ್ಲ. ಆದ್ದರಿಂದ ವಿಶ್ರಾಂತಿಯನ್ನು ಪಡೆಯಲಿಚ್ಛಿಸುತ್ತಾಳೆಂದು ಸ್ಟೀನನು ಕೊನೆಗೆ ನಂಬಿ "ಈಗಅವಳನ್ನು ಅವಳಪಾಡಿಗೆ ಬಿಟ್ಟುಕೊಡಬೇಕು, ನಂತರ ಹೋಗಿ ಕೂಡಿಕೊಂಡರಾಯಿತು? ಎಂದು ಆಲೋಚಿಸಿದ.

ವೆಂಟಳು ಸ್ಟೀನನ ಈ ವಿಚಾರವನ್ನು ಒಪ್ಪಿದಂತೆ ತೋರಿತು ಅವನಿಗೆ. ಲಾಸಾನದಲ್ಲಿಯ ತನ್ನ ವಿಳಾಸವನ್ನು ಕೊಟ್ಟಳು.

ಮೇಜರ ಹಾರ್ಟವೆಗನು ಅವಳ ಪ್ರಯಾಣಕ್ಕಾಗಿ ಪಾಸ್ಪೋರ್ಟನ್ನೂ ಇತರ ಅವಶ್ಯಕ ಕಾಗದ ಪತ್ರಗಳನ್ನೂ ಸಂಗ್ರಹಿಸಿದನು. ಜನರೆದುರಿಗೆ ಅವಳು ಹೇಳಿಟ್ಟಂತೆ ಲಾಸಾನಕ್ಕೆ ತೆರಳುವುದಕ್ಕಾಗಿ ಒಂದಿನ ಮುಂಜಾನೆ

ಬಾಸ್ಲೆಯು ಕಡೆಗೆ ಹೋಗುವ ಗಾಡಿಯನ್ನು ಹತ್ತಿದಳು. ಅವಳು ಮ್ಯುನಿತಕ್ಕೆ ಬಂದೊಡನೆ ಇಳಿದು ರಾತ್ರಿಯನ್ನು ಅಲ್ಲಿಯೇ ಕಳೆದು ಮರುದಿನ ಮುಂಜಾನೆ ಅಲ್ಲಿಂದ ಬೇರೊಂದು ಗಾಡಿಯನ್ನು ಹಿಡಿದು ಹಾಂಬರ್ಗಕ್ಕೆ ಸಾಗಿದಳು. ಅವಳು ಬರ್ಲಿನ ಬಿಟ್ಟಂದಿನಿಂದ ಸ್ಟೀನನಿಗೂ ಬರ್ಲಿನದಲ್ಲಿದ್ದ ಅವಳ ಇತರ ಮಿತ್ರರಿಗೂ ಆ ಸುಂದರಿ ವೆಂಟಳ ಸುದ್ದಿಯೆ ತಿಳಿಯಲಿಲ್ಲ.

ಹಾಂಬರ್ಗದ ಆ ಅಂದವಾದ ಬಂಗಲೆಯಲ್ಲಿ ಮೇಜರ ಹಾರ್ಟವೆಗನು ಇವಳದಾರಿ ಕಾಯುತ್ತ ನಿಂತಿದ್ದನು. ಅವನ ಜೊತೆಗೆ ನರೆಗೂಧಲಿನ ಹಿರಿಯ ಮನುಷ್ಯನೊಬ್ಬನು ಇದ್ದನು. ಆ ಹಿರಿಯನು ಪ್ರೊಫೆಸರ ವರ್ನರನೆಂದು ವೆಂಟಳಿಗೆ ಪರಿಚಯ ಮಾಡಿಕೊಡಲಾಯಿತು.

ವೆಂಟಳು ಆ ಬಂಗಲೆಯನ್ನು ಪ್ರವೇಶಿಸಿದ ಕೂಡಲೆ ಅವಳಿಗೆ ಹೆದರಿಕೆ ಬಂದಂತಾಯಿತು. ತಾನು ಪ್ರವೇಶಿಸಿದಂತೆಲ್ಲ ತನ್ನ ಬೆನ್ನಹಿಂದೆ ಕಾರಾಗೃಹದ ಬಾಗಿಲುಗಳನ್ನು ಭದ್ರವಾಗಿ ಮುಚ್ಚಿಬಿಡುತ್ತಿದ್ದಾರೆಂದು ಅವಳಿಗೆ ಭಾಸವಾಯಿತು, ತನಗೆ ಅಪಾರ ದ್ರವ್ಯ ದೊರೆಯುವುದು. ಮತ್ತೆ ತಾನು ಬರ್ಲಿನಕ್ಕೆ ಹಿಂದಿರುಗಬಹುದು. ಪುನಃ ನಗರವಾಸದ ಭೋಗವನ್ನು ಪಡೆಯಬಹುದು. ಸ್ಟೀನನನ್ನು ಕೂಡಿಕೊಳ್ಳಬಹುದೆಂದು ತಾನು ಭಾವಿಸಿದ್ದೆಲ್ಲ ಬರಿಭ್ರಮೆ ಎಂದು ಪ್ರೊ. ವರ್ನರನ ದರ್ಶನ ಮಾತ್ರದಿಂದಲೆ ಅವಳಿಗೆ ಹೊಳೆದಂತಾಗಿ ಅರಚಿಕೊಳ್ಳಬೇಕೆಂದಳು. ಈ ಬಂಗಲೆಯಿಂದ, ಇವರಿಬ್ಬರಿಂದ ತನ್ನ ಬಿಡುಗಡೆಯಾದರೆ ಸಾಕು ಎಂದು ಅವಳಿಗೆ ಅನಿಸಿತು. ಭೋಜನವು ನಡೆದಾಗ ಈ ಹೆದರಿಕೆ ಕ್ರಮಶಃ ಕಡಿಮೆಯಾಗಹತ್ತಿತು. ಆಹಾರ ಸಮಿಾಚೀನವಾಗಿತ್ತು. ಸುರೆಯು ರುಚಿಕರವಾಗಿತ್ತು. ಮೇಜರ ಹಾರ್ಟವೆಗನು ಅಲ್ಲಲ್ಲಿಯ ಸಮಾಚಾರವನ್ನು ತಿಳಿಸಿ ವೆಂಟಳ ಬೇಸರವನ್ನು ಕಳೆಯಲು ಪ್ರಯತ್ನಿಸುತ್ತಿದ್ದನು. ಆದರೆ ಆ ಪ್ರೊಫೆಸರನ ಭಾವಶೂನ್ಯವಾದ ಜಿಕ್ಕಿನ ಕಣ್ಣುಗಳನ್ನು ಕಂಡರೆ ಮಾತ್ರ ಅವಳಿಗೆ ಪುನಃ ಹೆದರಿಕೆಯಾಗುತ್ತಿತ್ತು. ಅವನು ಮಿತಭಾಷಿಯಾಗಿದ್ದನು. ಭೋಜನವೂ ಅಷ್ಟಕ್ಕಷ್ಟೆ ಇತ್ತು. ತನ್ನನ್ನೇ ಅವನು ಅಪಾದ ಮಸ್ತಕವಾಗಿ ನಿಟ್ಟಿಸುತ್ತಿದ್ದಂತೆ ವೆಂಟಳಿಗೆ ತೋರಿತು. ತಾನು ಅವನನ್ನು

ನೋಡದಿದ್ದರೂ ಅವನ ಭಾವಶೂನ್ಯನೋಟವು ತನ್ನಲ್ಲಿಯೇ ನೆಟ್ಟಂತೆ ಅವ ಳಿಗೆ ಭಾಸವಾಯಿತು. ಸೇವಕರು ಇನ್ನಷ್ಟು ಸುರೆಯನ್ನು ತಂದಿಟ್ಟು ಅಲ್ಲಿಂದ ಹೊರಟುಹೋದರು.

ಪ್ರೊಫೆಸರನು ಸಮಾಧಾನದಿಂದ ತನ್ನ ಕುರ್ಚಿಯನ್ನು ಹಿಂದೂಡಿ ಒಂದು ಸಿಗರೇಟನ್ನು ಹೊತ್ತಿಸಿದ. ಹಾರ್ಟವೆಗನೂ ಒಂದನ್ನು ಹೊತ್ತಿಸಿ ಸಿಗರೇಟನ್ನು ವೆಂಟಳಿಗೆ ನೀಡಿದ. ಹಾರ್ಟವೆಗನು ಕೊಟ್ಟ ಕಡ್ಡಿಯಿಂದ ಅದನ್ನು ಹೊತ್ತಿಸಲು ಪ್ರಯತ್ನಿಸಿದಳು. ಅವಳ ಕೈ ಕಂಪಿಸುತ್ತಿದ್ದಂತೆ ಕಂಡುಬಂತು. ಪ್ರೊಫೆಸರನು ಉಪೇಕ್ಷೆಯ ನಗುವನ್ನು ಬೀರಿ “ ವೆಂಟ ನೀನು ಖಂಡಿತವಾಗಿ ಹೆದರಿಕೊಂಡಿರುವಿ. ಆದರೆ ಈ ಪರ್ವತ ಪ್ರದೇಶದ ಶುದ್ಧ ನಿರ್ಮಲ ವಾತಾವರಣದಿಂದ ನೀನು ಚೇತರಿಸಿಕೊಳ್ಳುವದರಲ್ಲಿ ಸಂದೇ ಹವಿಲ್ಲ. ನಾವೀಗ ಏಕಾಂತದಲ್ಲಿರುವೆವು ನಮ್ಮ ಕೆಲಸದ ಬಗ್ಗೆ ಕೆಲ ಮಾತುಗಳನ್ನಾಡೋಣ. ಹಾರ್ಟವೆಗನು ನಮ್ಮ ವ್ಯವಸ್ಥೆಯನ್ನೆಲ್ಲಾ ತಿಳಿ ಸಿರುವನ ? ” ಎಂದು ನಿರ್ವೇಗದಿಂದ ಹೇಳಿದನು.

ವೆಂಟಳು ಹೌದೆಂದು ಗೋಣು ಹಾಕಿದಳು.

“ ಇಲ್ಲಿ ಬಂದು ಹಾರ್ಟವೆಗನನ್ನು ಭೆಟ್ಟಿಯಾಗಬೇಕೆಂಬುದನು ಬಿಟ್ಟು ನನಗೆ ಹೆಚ್ಚಿಗೇನೂ ಗೊತ್ತಿಲ್ಲ” ಎಂದಳು.

ತನ್ನಲ್ಲಿಯೇ ವಿಚಾರಗಳ ಕೋಲಾಹಲವೆದ್ದವನಂತೆ ಪ್ರೊಫೆಸರನು ಅವಳಿಗೆ ಹೇಳಹತ್ತಿದನು.

“ ನನ್ನ ವಿಚಾರಗಳಿಂತಿವೆ. ನಮ್ಮ ಉಭಯತರ ಕರಾರಿನಂತೆ ನಾಳಿನ ದಿನ ನಾವು ಹಾರ್ಟವೆಗನೊಡನೆ ಬ್ರುಸ್ಸವಿಕಕ್ಕೆ ತೆರಳಿ ಅಲ್ಲಿಯ ಡುಪಿಬ್ಯಾಂಕಿ ನಲ್ಲಿ ನಿನ್ನ ಹೆಸರಿನಲ್ಲಿ ನಿನಗೆ ಸಲ್ಲತಕ್ಕ ಹಣವನ್ನು ಇಡಗಂಟಾಗಿ ಇಡೋಣ. ತೀರ ನೋವಾಗದ ಚಿಕ್ಕ ಶಸ್ತ್ರಕ್ರಿಯೆ ಮಾಡಬೇಕಾಗುವದು. ಆದರೆ ಈ ಪ್ರಯೋಗಕ್ಕೆ ನಿನ್ನನ್ನು ಎಚ್ಚರದಪ್ಪಿಸುವದು ಅವಶ್ಯಕವಾಗಿದೆ. ಇದರಿಂದ ನಿನಗೆ ಸ್ವಲ್ಪ ತೊಂದರೆಯಾಗಬಹುದು. ಆದರೆ ಚೇತರಿಸಿಕೊಂಡ ನಂತರ ಪುನಃ ಈಗಿನಂತೆಯೆ ಆಗುವಿ ”

" ಅನಂತರ ನಾನು ಬೇಕಾದಲ್ಲಿಗೆ ಹೋಗಲು ಸ್ವತಂತ್ರಳಲ್ಲವೇ ? " ಎಂದವಳು ಪ್ರಶ್ನಿಸಿದಳು.

" ಆ ವಚನವನ್ನು ಕೊಡಬಲ್ಲೆನೆಂದು ನಾನು ಹೇಳಲಾರೆ " ಎಂದು ಪ್ರೊ ವರ್ನರನು ವಿಚಾರದಲ್ಲಿ ತನ್ನ ಗಡ್ಡವನ್ನು ತುರಿಸಿಕೊಂಡು ಹೇಳಿದ. "ಸುಪ್ರಜಾ ಜನನ ಶಾಸ್ತ್ರದ ತೀರ ಪ್ರಗತಿಪರವಾಗಿದ್ದ ತತ್ವವನ್ನು ಆಧರಿಸಿ ಈ ಪ್ರಯೋಗವು ನಡೆಯಲಿರುವದರಿಂದ ವಿಶಿಷ್ಟ ವಾತಾವರಣದಲ್ಲಿಯೆ ನೀನು ವಾಸಿಸಬೇಕಾಗುವದು. ನಿಜವನ್ನರುಹಬೇಕೆಂದರೆ ನೀನಿನ್ನು ಹಾಂಬರ್ಗದಲ್ಲಿ ಒಂದುವರ್ಷ ನಮ್ಮ ಆತಿಥ್ಯವನ್ನು ಸ್ವೀಕರಿಸಬೇಕಾಗುವದು. "

" ಅಂದರೆ ನನ್ನನ್ನಿಲ್ಲಿ ಸೆರೆಯಾಳಾಗಿಡುವಿರೇನು ? " ಎಂದು ಉದ್ವೇಗದಿಂದ ಕೇಳಿದಳು.

" ಸೆರೆಯಾಳೆ? ಇದೇತ ಮಾತು ಪ್ರಿಯ ವೆಂಟಿ. ನೀನಿಲ್ಲಿ ಸ್ವತಂತ್ರಳು ಸ್ವೇಚ್ಛೆಯಂತೆ ವಿಹರಿಸ ಬಲ್ಲೆ. ಆದರೆ ಸದ್ಯಕ್ಕೆ ನೀನು ಹಾಂಬರ್ಗದಲ್ಲಿರಬೇಕೆಂದೇ ನಮ್ಮ ಕರಾರು. ನಿನಗಾಗಿ ನಾನು ಉತ್ತಮ ಸಂಗಾತಿಯನ್ನು ಹುಡುಕಿ ತಂದಿದ್ದೇನೆ. ಸುತ್ತು ಮುತ್ತಲಿನ ಪ್ರಕೃತಿ ಸೌಂದರ್ಯವೂ ನಿನ್ನ ವಿಹಾರಕ್ಕನುಕೂಲವಾಗಿದೆ. ನಿನಗೊಂದು ಒಂದು ಕಾರನ್ನು ಇಡಲಾಗಿದೆ ಬೇಕಾದರೆ ಆಗಾಗ ಬ್ರನ್ಸವಿಕ ಹ್ಯಾನೋವರಗಳಿಗೆ ಹೋಗಿ ಬರಬಹುದು. ನೀನಿಲ್ಲಿರುವ ವರೆಗೆ ಸುಖವಾಗಿರಬೇಕೆಂಬುದೊಂದೇ ವಿಚಾರ ನಮಗೆ. ನೀನು ನಮ್ಮ ಅತಿಥಿ" ಎಂದು ಹಾರ್ಟವೇಗ .. ಹೇಳಿ ಪ್ರೊ. ವರ್ನರನನ್ನು ನೋಡಿದ.

ವೆಂಟಳು ಒಬ್ಬೊಬ್ಬರನ್ನು ಕರಡಿಯಂತೆ ದಿಟ್ಟಿಸುತ್ತಿದ್ದಳು. ಕ್ಷಣ ಕ್ಷಣಕ್ಕೂ ಏನೋ ಅವಳಲ್ಲಿ ಹೆದರಿಕೆಯ ಭಾವನೆ ಹೆಚ್ಚುತ್ತಿತ್ತು; ಅದರೊಡನೆ ನಿರಾಶೆಯ ಪ್ರಭಾವವೂ ಕಂಡುಬರುತ್ತಿತ್ತು. ಅವಳು ಬಹು ಪ್ರಯತ್ನದಿಂದ ಹೇಳಿದಳು.

" ಇದು ನನಗೆ ಒಗ್ಗೀತೆಂದು ಹೇಳಲಾರೆ. ಬರ್ಲಿನದಲ್ಲಿ ಈ ವಿಚಾರಗಳನ್ನು ಹೇಳಿದಾಗ ನನಗೆ ಎಲ್ಲವೂ ಬೇರೆ ರೀತಿಯಲ್ಲಿ ತೋರಿತು. ಹಾರ್ಟವೇಗನು ಈ ಬಗ್ಗೆ ಹೇಳಿದಾಗ ನನಗಿದು ಇಷ್ಟು ಭೀಕರವಾಗಿ ತೋರಿರಲಿಲ್ಲ.

ನೀವು ನಾಳೆಗೆ ನನ್ನನ್ನು ಬರ್ಲಿನಕ್ಕೆ ತಿರುಗಿ ಕಳಿಸಬೇಕು. ನಾಳಿನ ದಿನವೇ” ಎಂದವಳು ಹಾರ್ಟವೇಗನಿಗೆ ಕೈಜೋಡಿಸಿದಳು. ಪ್ರೊಫೆಸರನು ಎದ್ದು ಬಂದು ಅವಳ ಸಮೀಪದಲ್ಲಿ ನಿಂತನು.

“ ವೆಂಟ ಮನಸ್ಸಿಗೆ ಈ ರೀತಿ ತೊಂದರೆ ಕೊಡಬೇ: ಪ್ರವಾಸದಿಂದ ನಿನಗೆ ಬಹಳ ದಣಿವಾಗಿದೆ. ನಾಳೆ ಮುಂಜಾನೆ ನಿನಗೆ ಆರಾಮವೆನಿಸಬಹುದು. ನಾಳೆ ಮತ್ತೆ ಮಾತಾಡೋಣವಂತೆ. ನಿನ್ನ ಕೋಣೆಗೆ ನಿನ್ನನ್ನು ಕರೆದೊಯ್ಯಲು ದಾಸಿಯನ್ನು ಕರೆಯುವೆ”ನೆಂದು ಪ್ರೊಫೆಸರನು ಹಟಮಾರಿ ಮಗುವಿಗೆ ತಿಳಿಸಿಹೇಳುವ ರೀತಿಯಲ್ಲಿ ನುಡಿದು ಮೇಜಿನ ಮೇಲಿನ ಕರೆಗಂಟೆಯನ್ನು ನುಡಿಸಿದ.

ವೆಂಟಳು ಎದ್ದಳು ಇವರಿಬ್ಬರ ಸನ್ನಿಧಾನದಿಂದ ಕೊಟ್ಟು ಹೋದರೆ ಹಾಯೆನಿಸೀತೆಂದು ಅವಳು ಬಗೆದಳು. ಅಷ್ಟರಲ್ಲಿ ಒಬ್ಬ ಹೆಣ್ಣುಮಗಳು ಬಂದಳು.

“ ವೆಂಟಳನ್ನು ಅವಳ ಕೋಣೆಗೆ ಕರೆದುಕೊಂಡು ಹೋಗು ” ಎಂದು ಪ್ರೊಫೆಸರನು ಆ ಸ್ತ್ರೀಗೆ ಹೇಳಿ ವೆಂಟಳ ಕೈಯನ್ನೆತ್ತಿಕೊಂಡು ಅವಳಿಗೆ ಮಣಿದು ನಮಸ್ಕರಿಸಿದಂತೆ ಮಾಡಿ “ ಒಳ್ಳೇದು ವೆಂಟ, ಸುಖಸ್ವಪ್ನಗಳನ್ನು ಕಾಣು. ” ಎಂದು ನುಡಿದನು.

ಶವಸ್ಪರ್ಶವಾದಂತೆ ಅವಳು ಬೆಚ್ಚಿ ಪ್ರೊಫೆಸರನಿಂದ ತನ್ನ ಕೈಯನ್ನು ಬಿಡಿಸಿಕೊಂಡು ಹಾರ್ಟವೇಗನ ಕಡೆಗೆ ತಿರುಗಿ “ ಈ ವಿಷಯದಲ್ಲಿ ಮುಂದರಿಯುವದು ನನ್ನ ಇಚ್ಛೆಯಿಲ್ಲೆಂಬುದು ನಿನಗೆ ಸ್ಪಷ್ಟವಾಯಿತೆ. ನಾಳಿಗೆ ನಾನು ಬರ್ಲಿನಕ್ಕೆ ಹೊರಡುತ್ತೇನೆ.” ಎಂದವಳೇ ರಭಸದಿಂದ ಹೊರ ಹೊರಟಳು.

ಅವಳು ಹೊರಟು ಹೋದೊಡನೆ ಬಾಗಿಲು ಪುನಃ ಮುಚ್ಚಿತು. ಪ್ರೊಫೆಸರನು ಉಪೇಕ್ಷೆಯಿಂದ ನಕ್ಕ. ಮೇಜರ ಹಾರ್ಟವೇಗನು ಚಿಂತಾಕ್ರಾಂತನಾಗಿ ಅವನ ಮುಖವನ್ನು ನೋಡಿದ.

‘‘ ಎಲಾ ಇವಳ ಹಾಳಾಗ ! ಈಗೇನು ಮಾಡಬೇಕು. ಸರ್ವ ವಿಧದಲ್ಲಿ ತೃಪ್ತಿಕರಳಾದ ಬೇರೊಬ್ಬಳನ್ನು ಹುಡುಕಬೇಕಾದರೆ ಬಹಳ ಸಮಯಬೇಕಲ್ಲವೇ? ” ಎಂದ ಹಾರ್ಟವೇಗ.

ಪ್ರೊಫೆಸರನ ನಗು ಇನ್ನೂ ಹೆಚ್ಚಿತು. ತನ್ನ ಮನಸ್ಸಿನಲ್ಲಿಯೆ ಏನೋ ಎಣಿಕೆ ಹಾಕುತ್ತ ಒಂದೆರೆಡು ನಿಮಿಷ ಕಳೆದ. ಕೂಡಲೆ,

" ಹಾರ್ಟವೆಗ, ಪುನಃ ಹೆಣ್ಣನ್ನು ಹುಡುಕುವುದರಲ್ಲಿ ವೇಳೆಗಳೆಯಲ ನನಗಿಷ್ಟವಿಲ್ಲ. ವೆಂಟಳು ಸ್ತ್ರೀತ್ವದ ಅತ್ಯುತ್ತಮ ಮಾದರಿಯಾಗಿದ್ದಾಳೆ. ನಾನಂಥವಳನ್ನೂ ಎಲ್ಲಿಯೂ ಕಂಡಿಲ್ಲ. ಅಲ್ಲದೆ ಅವಳಲ್ಲಿ ಚಾಂಚಲ್ಯವೂ ಇಲ್ಲ; ನಮ್ಮ ಮಹತ್ಪ್ರಯೋಗಕ್ಕೆ ಅವಳೇ ಆದರ್ಶವಸ್ತು. " ಎಂದು ವರ್ನರನು ಶಾಂತಚಿತ್ತದಿಂದ ನುಡಿದನು.

" ಆದರೆ ಅವಳು ನಮ್ಮ ಕರಾರುಗಳನ್ನು ಒಪ್ಪುವದಿಲ್ಲವಲ್ಲ. ನಾಳಿಗೆ ಅವಳು ಬರ್ಲಿನಕ್ಕೆ ಹಿಂತಿರುಗುವಳು. ಆಡಿದಂತೆ ಮಾಡುವವಳು ಅವಳು. "

"ವೆಂಟಳು ನಾಳಿಗೆ ಇಲ್ಲಿಯೆ ಉಳಿಯುವಳು. ಅಷ್ಟೇಕೆ, ಇನ್ನೂ ಅನೇಕ ದಿವಸಗಳ ವರೆಗೆ ಅವಳ ವಾಸ ಇಲ್ಲಿಯೇ " ಎಂದು ಪ್ರೊಫೆಸರನು ನಿರ್ಧಾರ ದಿಂದ ನುಡಿದ.

" ಆದರೆ, ನೀವು ಅವಳನ್ನು ಹೇಗೆ ತಡೆಯಬಲ್ಲಿರಿ. ಬಲಪ್ರಯೋಗ ವಂತೂ ಸಾಧ್ಯವಿಲ್ಲ. ಅದು ಗಂಡಾಂತರದ್ದು. "

ಪ್ರೊಫೆಸರನು ಇನ್ನೊಂದು ಸಿಗರೇಟನ್ನು ಆಯ್ದುಕೊಂಡು ಹೊತ್ತಿಸಿ ಝುರಕಿ ಎಳೆದು ಒಂದೆರಡು ನಿಮಿಷ ಮೌನವಾಗಿದ್ದ.

" ತೀರ ಸುಲಭ ಉಪಾಯದಿಂದ ನಾನು ಅವಳನ್ನು ತಡೆಯ ಹಿಡಿಯ ಬಲ್ಲೆ. ನನ್ನ ಪ್ರಯೋಗವು ಇಂದೇ ರಾತ್ರಿ ನಡೆಯುವದು. ನಾವು ಉಪ ಯೋಗಿಸಿದ ಮದ್ದಿನಿಂದ ನಾಳಿನ ದಿನ ಅವಳು ಇನ್ನೂ ಅದರ ಗುಂಗಿನಲ್ಲಿಯೇ ಇರುವಳು. ನಂತರ ಏನಾಗುವದೊ ನೋಡಿಕೊಂಡರಾಯಿತು. ಸ್ವಲ್ಪ ಸಮಯ ಅವಳನ್ನು ಎಚ್ಚರದಪ್ಪಿಸಿಡಬೇಕಾದೀತು. " ಎಂದು ಪ್ರೊಫೆಸರನು ಅಸ್ಖಲಿತವಾಗಿ ಹೇಳಿದ.

" ಅಂದರೆ ಇಂದು ರಾತ್ರಿಯೆ ನಿಮ್ಮ ಪ್ರಯೋಗ ನಡೆಸುವಿರಾ ? " ಎಂದು ಹಾರ್ಟವೆಗನು ಮುಂದೆ ಬಾಗಿ ಪಿಸು ಮಾತಿನಲ್ಲಿ ಕೇಳಿದ.

" ಹೌದು. ಈ ಪ್ರಯೋಗವು ನಾಳೆ ರಾತ್ರಿ ನಡೆಯಬೇಕೆಂದು ನಾನು ಆಲೋಚಿಸಿದ್ದೆ. ಆದರೆ ಇಂದಿನ ಘಟನೆಗಳನ್ನು ನೋಡಿದರೆ ಎಲ್ಲವೂ ಸಿದ್ಧ ವಿದೆಂದು ತೋರುತ್ತದೆ. ನಂತರ ತಡವೇಕೆ ? ಪ್ರಯೋಗದ ಸಿದ್ಧತೆ ಮಾಡಿಡಲು ನಾನು ನನ್ನ ಕೈಕೆಳಗಿನ ಮುಲ್ಲರನಿಗೆ ಹೇಳಿಡಬೇಕಾಗಿದೆ. " ಎಂದು ಪ್ರೊಫೆಸರನು ಪುನಃ ಕರೆಗಂಟೆಯನ್ನು ನುಡಿಸಿದ. ಕೂಡಲೆ ದಾಸಿಯು ಬಂದಳು. ಮುಲ್ಲರನ್ನು ಕಳಿಸಿಕೊಡೆಂದು ಅವಳಿಗೆ ಹೇಳಿದ್ದಾಯಿತು.

ಒಂದೆರಡು ನಿಮಿಷಗಳಲ್ಲಿಯೆ ಇಪ್ಪತ್ತಾರು ವರ್ಷದ ತರುಣ ಮುಲ್ಲರನು ಪ್ರವೇಶಿಸಿದ. ಪ್ರೊಫೆಸರ ವರ್ನರನು ಅವನಿಗೆ ಕೊಡಬೇಕಾದ ಸೂಚನೆಗಳನ್ನೆಲ್ಲ ಕೊಟ್ಟನಂತರ,

" ಈಗ ಗಂಟೆ ಹನ್ನೊಂದಾಗಿದೆ. ಇನ್ನೆರಡು ತಾಸುಗಳಲ್ಲಿ ಎಲ್ಲ ಸಿದ್ಧತೆ ಮಾಡಿಕೊಂಡು ನನಗಾಗಿ ಮೇಲಟ್ಟದ ಮೇಲೆ ದಾರಿ ಕಾಯುತ್ತಿರು" ಎಂದು ಆಜ್ಞಾಪಿಸಿದ. ಮುಲ್ಲರನು ಅವನನ್ನು ವಂದಿಸಿ ತೆರಳಿದನು.

" ಒಂದು ಗಂಟೆಯ ವರೆಗೆ ನನಗೇನೂ ಕೆಲಸವಿಲ್ಲ ಮೇಜರ, ಹಿಡಿ ಹೊತ್ತಿಸು ಇನ್ನೊಂದು ಸಿಗಾರೇಟು. ಇಸ್ಪೇಟಿನ ಆಟದಿಂದ ಮನಸಿಗೆ ಸ್ವಲ್ಪ ನೆಮ್ಮದಿ ತಂದು ಕೊಳ್ಳೋಣ. " ಎಂದು ನುಡಿದು ಪ್ರೊಫೆಸರನು ಸಮೀಪದ ಇನ್ನೊಂದು ಮೇಜಿನ ಮೇಲಿನ ಇಸ್ಪೇಟು ಪ್ಯಾಕನ್ನು ಎತ್ತಿಕೊಂಡನು.

## ೭

ಮೆಂಟಳಿಗೆ ಎಚ್ಚರವಾದದ್ದು ಮರುದಿನ ಮಧ್ಯಾಹ್ನದಲ್ಲಿಯೆ. ಸೂರ್ಯ ಕಿರಣಗಳು ಅವಳ ಕೋಣೆಯಲ್ಲಿ ಪ್ರವೇಶಿಸಿದ್ದವು. ಮೊದಲಿಗೆ ತಾನೆಲ್ಲಿರುವೆನೆಂಬುದೆ ಮೆಂಟಳಿಗೆ ತಿಳಿಯಲಿಲ್ಲ. ಅವಳ ದೇಹಾದ್ಯಂತವೆಲ್ಲ ಸೀಸದಂತೆ ಭಾರವಾಗಿತ್ತು. ಮನಸಿಗೂ ಮಂಕು ಕವಿದಿತ್ತು. ಮೈಯಲ್ಲಿಯ ಚೇತನವೆಲ್ಲ ಉಡುಗಿ ಹೋದಂತಾಗಿತ್ತು. ಸುಮ್ಮನೆ ಅಲ್ಲಿಯೆ ಒರಗಿ ಪುನಃ ನಿದ್ದೆ ಹೋಗಬೇಕೆಂದೆ ಅವಳಿಗೆನಿಸುತ್ತಿತ್ತು. ಕೋಣೆಯೊಳಗಿನ ಹವೆಯಲ್ಲೆಲ್ಲ ಏನೋ ಅಸಹ್ಯ ದುರ್ಗಂಧವು ಬೆರೆತು ಕೊಂಡಿತ್ತು. ತನ್ನ ಸಮೀಪದಲ್ಲಿ ಯಾರೋ ನಿಂತುಕೊಂಡು ತನ್ನ ಯೋಗಕ್ಷೇಮವನ್ನು ವಿಚಾರಿಸುತ್ತಿರುವಂತೆ

ತೋರಿತು ಅವಳಿಗೆ. ನಿನ್ನೆ ತನ್ನನ್ನು ತನ್ನ ಕೋಣೆಗೆ ಕರೆದೊಯ್ದ ಹೆಂಗಸೇ ಅವಳಾಗಿದ್ದಳು. ಅವಳ ಕೈಯ್ಯಲ್ಲೊಂದು ಕಪ್ಪು ಇತ್ತು.

" ಇದನ್ನು ಕುಡಿ, ಸ್ವಲ್ಪ ಹುಷಾರಿ ತೋರಬಹುದು. " ಎಂದಳು ಆ ದಾಸಿ.

ವೆಂಟಳು ಬಹು ಪ್ರಯಾಸದಿಂದ ಎದ್ದು ಕುಳಿತು ಆ ಕಪ್ಪಿನಲ್ಲಿಯ ಪೇಯವನ್ನು ಅವಳು ಕುಡಿದಳು. ಆ ಪೇಯ ಹಾಲೆಂದೇ ತೋರಿತವಳಿಗೆ. ಅದನ್ನು ಕುಡಿದವಳೆ ವೆಂಟಳು ಪುನಃ ನಿದ್ರೆಯ ರಾಜ್ಯಕ್ಕೆ ಜಾರಿಬಿಟ್ಟಳು. ಮತ್ತೆ ಅವಳಿಗೆ ಎಚ್ಚರವಾದಾಗ ರಾತ್ರಿಯಾಗಿತ್ತು. ಕೋಣೆಯಲ್ಲಿ ದೀಪ ಉರಿಯುತ್ತಿತ್ತು. ಈಗ ಅವಳ ಮನಸ್ಸಿನ ಜಾಡ್ಯವು ಹರಿದುಹೋಗಿತ್ತು. ತಾನೆಲ್ಲಿರುವೆನು ಎಂಬುದರ ಅರಿವು ಅವಳಿಗುಂಟಾಯಿತಲ್ಲದೆ ನಿನ್ನೆ ರಾತ್ರಿಯ ಘಟನೆಗಳೆಲ್ಲ ಚಲಚಿತ್ರದಂತೆ ಅವಳ ಮನಸ್ಸಿನಲ್ಲಿ ಮೂಡಿ ಮಾಯವಾದುವು. ಈ ನೆನಪಿನೊಂದಿಗೆ ಅವಳಿಗೆ ಹೆದರಿಕೆಯೂ ಪ್ರಾರಂಭವಾಯಿತು. ತಾನೆಲ್ಲಿ ಇದ್ದೇನೆ? ಇನ್ನೂವರೆಗೂ ಹಾಸಿಗೆಯಲ್ಲಿ ಬಿದ್ದುಕೊಂಡಿರುವುದೇಕೆ? ನಿನ್ನೆ ರಾತ್ರಿ ನಡೆದುದೇನು ? ಕೊನೆಯ ವಿಚಾರ ಅವಳಲ್ಲಿ ಸುಳಿದೊಡನೆ ಚಿಟ್ಟನೆ ಚೀರಿ ಹಾಸಿಗೆಯಿಂದ ನೆಗೆದೆದ್ದಳು. ಈ ಕೂಗನ್ನು ಕೇಳಿ ದಾಸಿಯು ಧಾವಿಸಿ ಬಂದು,

"ತಮಗೇನಾದರೂ ಬೇಕಾಗಿತ್ತೆ ?" ಎಂದಳು.

" ಏನು ನಡೆಯಿತು ಹೇಳು. ನನಗೆ ಕಾಯಿಲೆಯಾಗಿತ್ತೆ ? ನನಗೆ ಈ ರೀತಿ ಅನಿಸಬೇಕಾದರೆ ನೀನು ನನಗೆ ಏನನ್ನು ಕೊಟ್ಟೆ ಹೇಳು ? " ಎಂದು ವೆಂಟಳು ಅವಳ ತೋಳನ್ನು ಹಿಡಿದು ನಿಲ್ಲಿಸಿ ಕೇಳಿದಳು.

ಆ ದಾಸಿಯು ಇವಳಿಂದ ಮುಖ ತಿರುಗಿಸಿ, " ನಿನ್ನೆ ರಾತ್ರಿ ನಿಮಗೆ ಬಹಳ ಪ್ರಯಾಸವಾದ್ದರಿಂದ ಪ್ರೊಫೆಸರರು ಮಾದಕದ್ರವವನ್ನು ಕೊಡುವುದವಶ್ಯಕವೆಂದು ಭಾವಿಸಿದರು " ಎಂದು ತಿಳಿಸಿದಳು.

" ನನ್ನ ಬಟ್ಟೆಗಳನ್ನು ತಾ. ನಾನೀಗಲೆ ಹೋಗಿ ಪ್ರೊಫೆಸರನನ್ನು ಕಾಣಬೇಕಾಗಿದೆ " ಎಂದು ಆ ದಾಸಿಯನ್ನು ದಬ್ಬಿದಂತೆ ಮಾಡಿದಳು. ಅವಳ

ದನಿ ಕಠೋರವಾಗಿತ್ತು, ಎಚ್ಚತ್ತೊಡನೆ ಅವಳಲ್ಲಿ ಸುಳಿದ ವಿಚಾರವು ಈಗ ದೃಢವಾಗಹತ್ತಿತು. ತನಗೆ ಸತ್ಯಸಂಗತಿ ತಿಳಿಯಬೇಕು !

ದಾಸಿಯು ಬಟ್ಟೆಗಳನ್ನು ತಂದುಕೊಟ್ಟಳು.

"ನಿಮ್ಮ ಮೈಯಲ್ಲಿನ್ನೂ ಹುಷಾರಿಯಿಲ್ಲ. ಕೆಲಗಂಟೆ ವಿಶ್ರಮಿಸಿದ ನಂತರ........"

ವೆಂಟಳು ಬಿರುನೋಟದಿಂದಲೆ ಅವಳ ಬಾಯಿಯನ್ನು ಮುಚ್ಚಿದಳು. ಅವಳಿಗೆ ಭಯಂಕರ ತಲೆಸಿಡಿತ ಪ್ರಾರಂಭವಾಗಿತ್ತು. ಕೋಣೆಯಲ್ಲಿಯ ವಸ್ತುಗಳೆಲ್ಲ ಉರುಳುರುಳಿ ಬೀಳುವಂತೆ ತೋರುತ್ತಿದ್ದವು. ತನ್ನನ್ನು ಮುತ್ತಿದ್ದ ಜಾಡ್ಯವನ್ನು ಅವಳು ಹೇಗೋ ತೊರೆದಳು. ಪ್ರೊಫೆಸರನನ್ನು ಕಂಡು ಸೂಕ್ಷ್ಮವನ್ನರಿತುಕೊಂಡು ಈ ಮನೆಯಿಂದ ಹೊರಬಿದ್ದುಬಿಡಬೇಕೆಂಬ ವಿಚಾರವೇ ಅವಳಿಗಿಷ್ಟು ಶಕ್ತಿಯನ್ನು ಕೊಟ್ಟಿತ್ತು. ಉಡುಪು ಹಾಕಿಕೊಳ್ಳಬೇಕಾದರೆ ಆವಳಿಗೆ ಸುಮಾರು ಸಮಯ ಹಿಡಿಯಿತು. ಕೊನೆಗೊಮ್ಮೆ ಸಿದ್ಧಳಾಗಿ ಹೊರಟಳು;

" ನನ್ನನ್ನು ನಿಮ್ಮ ಒಡೆಯನ ಕಡೆಗೆ ಕರೆದು ಕೊಂಡು ನಡೆ " ಎಂದು ಇದೂವರೆಗೂ ಅಲ್ಲಿಯೇ ನಿಂತಿದ್ದ ದಾಸಿಗೆ ಹೇಳಿದಳು. ದಾಸಿಯು ಮೊದಲು ಒಪ್ಪಲಿಲ್ಲ. ಕೊನೆಗೆ ಅನಿವಾರ್ಯವಾಗಿ ಅವಳನ್ನು ಮೇಲಟ್ಟದಿಂದ ಕೆಳಗಿನ ದಿವಾಣಖಾನೆಗೆ ಕರೆದುಕೊಂಡು ಬಂದು ತೆರೆಯಿಂದ ಮುಚ್ಚಿದ ಒಂದು ಬಾಗಿಲಿನೆದುರು ನಿಂತು ಕೊಂಡು ಪ್ರೊಫೆಸರರು ಒಳಗಿದ್ದಾರೆಂದು ಹೇಳಿ ವೆಂಟಳಿಗೆ ಪ್ರವೇಶಿಸಲನುಕೂಲವಂತೆ ಬಾಗಿಲಿನ ಆ ತೆರೆಯನ್ನು ಎತ್ತಿ ಹಿಡಿದಳು.

ವೆಂಟಳು ಬಾಗಿಲು ತಟ್ಟಿ ತಾನು ಬಂದ ಸೂಚನೆಯನ್ನು ಕೊಡದೆ ಒಮ್ಮೆಲೆ ಬಾಗಿಲನ್ನು ನೂಕಿ ಪ್ರವೇಶಿಸಿದಳು. ಮೇಜಿನ ಎದುರು ಕುಳಿತುಕೊಂಡು ಏನನ್ನೊ ಬರೆಯುತ್ತಿದ್ದ ಪ್ರೊಫೆಸರನು ವೆಂಟಳು ಬಂದದ್ದನ್ನು ಕಂಡು ಆ ಸನವನ್ನು ಬಿಟ್ಟು ಎದ್ದು ಅವಳ ಕಡೆಗೆ ಬಂದನು.

"ನೀನು ಇಷ್ಟೊಂದು ಹುಷಾರಾಗಿದ್ದನ್ನು ಕಂಡು ನನಗೆ ಬಹಳ ಸಂತೋಷವಾಯಿತು ವೆಂಟ ! ವಿಶ್ರಾಂತಿಯಿಂದ ನಿನಗೆ ಹಿತವಾಗಿದೆಂದು ತೋರುತ್ತದೆ" ಎಂದು ನುಡಿದು ಪ್ರೊಫೆಸರನು ಅವಳನ್ನು ಸ್ವಾಗತಿಸಲು ಕೈ ಮುಂದೆ ಚಾಚಿದನು.

" ನಿನ್ನೆ ರಾತ್ರಿ ನಡೆದುದೇನು ? ನೀನು ಔಷಧ ಕೊಟ್ಟು ನನ್ನ ಮೈಮ ರೆಸಿದ್ದೇಕೆ? ಎಂಬುದನ್ನು ಹೇಳಬಲ್ಲೆಯಾ ? "ಎಂದು ವೆಂಟಳು ಅವನ ಸ್ವಾಗ ತವನ್ನು ಉಪೇಕ್ಷಿಸಿ ಕೇಳಿದಳು.

ಪ್ರೊಫೆಸರನು ಮುಗುಳ್ನಗೆ ಸೂಸಿದ.

" ನಿನ್ನಂಥ ಚಾಣಾಕ್ಷಳು ಈ ಪ್ರಶ್ನೆ ಕೇಳಬಾರದಿತ್ತು, ವೆಂಟ್, ನಿನಗೆ ಬಳಲಿಕೆ ಬಹಳವಾಗಿದ್ದರಿಂದ..........."

" ಇನ್ನು ಹೆಚ್ಚು ಸುಳ್ಳು ಹೇಳಲು ಪ್ರಯತ್ನಿಸಬೇಡ. ನನ್ನ ಪ್ರಶ್ನೆಗೆ ನೇರವಾದ ಉತ್ತರ ಕೊಡು " ಎಂದು ಅವಳು ನಡುವೇ ಅವನನ್ನು ತಡೆದಳು

" ಹಾಗಾದರೆ, ಅರಿತುಕೊಳ್ಳು. ವಿಜ್ಞಾನದ ಅವಶ್ಯಕತೆಯನ್ನು ಗಮನಿಸಿ ನನ್ನ ಪ್ರಯೋಗವು ನಿನ್ನೆ ರಾತ್ರಿಯೆ ನಡೆಯಬೇಕೆಂದು ನಿರ್ಧರಿಸಿದ್ದೆ " ಎಂದು ನಿರ್ವಿಕಾರದಿಂದ ಹೇಳಿದನು.

೮

ವೆಂಟಳು ತನಗೆ ಇದು ವರೆಗೆ ದೊರೆತಿದ್ದ ಜಗತ್ತಿನ ವಿವಿಧ ಅನುಭವ ಗಳಿಂದ ಅನಿವಾರ್ಯವಾದುದನ್ನು ಪಾಲಿಗೆ ಬಂದಿದ್ದು ಪಂಚಾಮೃತವೆಂದು ಒಂದು ವಿವಿಧ ವೈರಾಗ್ಯದಿಂದ ತಾಳಿಕೊಳ್ಳುವದನ್ನು ಕಲಿತಿದ್ದಳು. ಇಬ್ಬರು ಪುರುಷರು ಸೇರಿ ತನ್ನನ್ನು ವಂಚಿಸಿದರು ಎಂಬ ಭಾವನೆ ಅವಳಲ್ಲಿ ಕಡಿಮೆಯಾದೊಡನೆ ದೈವದ ವಿರುದ್ಧ ಹೆಣಗಿ ಪ್ರಯೋಜನವೇನೆಂದು ಅವಳು ಭಾವಿಸಿದಳು. ಪ್ರಯೋಗವಂತೂ ನಡೆದು ಹೋಯಿತು. ಅದು ಯಶಸ್ವಿಯಾದರೆ ಒಂಬತ್ತು ತಿಂಗಳ ನಂತರ ತನಗೊಂದು ಮಗು ಹುಟ್ಟು ವದು. ಈ ಹೆಂಗೆಯ ವಿಷಯವೇನೋ ತೊಂದರೆಯದು. ಆದರೆ ಅನಂತರ ತನ್ನನ್ನು ವಂಚಿಸಿದ ಈ ಇಬ್ಬರು ಧೂರ್ತರ ಸೇಡು ತೀರಿಸಿಕೊಳ್ಳುವ ಸಮಯ ಅವಕಾಶ ತನಗೆ ದೊರೆಯುವದು. ತನ್ನ ಈ ಕಾರ್ಯವನ್ನು ತಾನು ಸಾಧಿ ಸಬೇಕಾದರೆ ಅವರಷ್ಟೇ ತಾನೂ ಚಾಣಾಕ್ಷಳಾಗಿರಬೇಕು. ಶತ್ರುಗಳನ್ನು ತನ್ನಧೀನದಲ್ಲಿಡುವಂತೆ ದೈವವನ್ನು ಕೇಳಿಕೊಳ್ಳಬೇಕು, ಎಂದು ಅವಳ ಭಾವಿಸಿದಳು. ಆದರಿಂದು ಅವಳು ಹಾರಬರ್ಗದಲ್ಲಿಯ ಒತ್ತಾಯದ ವಾಸ ವ್ಯವನ್ನು ಆದಷ್ಟು ನೆಮ್ಮದಿಯದಾಗಿಸಿಕೊಳ್ಳಬೇಕೆಂದಳು.

ಅಲ್ಲಿಯ ಹವೆಯು ಅವಳಿಗೆ ತ್ರಾಣಿಕವಾಗಿ ಪರಿಣಮಿಸಿತು. ದಿನ ದಿನಕ್ಕೆ ಹೆಚ್ಚುತ್ತಿದ್ದ ಅವಳ ಸೌಂದರ್ಯ ಲಾವಣ್ಯಗಳನ್ನು ಕಂಡು ಪ್ರೊಫೆಸರ ನಿಗೆ ಹರ್ಷವಾಯಿತು. ಈಗ ಅವಳು ಸ್ತ್ರೀತ್ವದ ಅಪೂರ್ವ ಮಾದರಿಯಾಗಿದ್ದಳೆಂದು ಅವನು ಭಾವಿಸಿದ. ಅವಳೂ ತನ್ನ ಜೀವನದಲ್ಲಿ ಒಂದು ವಿಧದ ಆನಂದವನ್ನು ಕಾಣತೊಡಗಿದ್ದಳು. ಪ್ರೊಫೆಸರನ ಬಗ್ಗೆ ಅವಳಲ್ಲಿದ್ದ ದ್ವೇಷವು ಕಡಿಮೆಯಾಗಿರದಿದ್ದರೂ ಅವನೊಬ್ಬ ಉತ್ತಮ ಸಂಗಾತಿಯೆಂದು ಅವಳಿಗೆನಿಸಿತು. ಅವರಿಬ್ಬರ ವಿಚಿತ್ರ ಸ್ವಭಾವಗಳಲ್ಲಿಯೂ ಒಂದು ' ವಿವಿಧ ಸಾಮ್ಯ ಕಂಡು ಬರುತ್ತಿತ್ತು. ಅವಳಲ್ಲಿ ಸುಪ್ತವಾಗಿದ್ದ ಕ್ರೌರ್ಯಭಾವವನ್ನು ಅವನು ಕಂಡು ಹಿಡಿದು ಅವಳರಿಯದಂತೆ ಅದಕ್ಕೆ ಪ್ರೋತ್ಸಾಹ ಕೊಡುತ್ತಿದ್ದನು. ಪ್ರಯೋಗಶಾಲೆಯಲ್ಲಿ ಅವನು ಪ್ರಯೋಗ ನಡೆಸುತ್ತಿರುವದನ್ನು ಇವಳು ನೋಡುತ್ತ ನಿಂತಿದ್ದು, ಆ ಮೂಕಪ್ರಾಣಿಗಳು ಇವನ ಚೂರಿಗಾಹುತಿಯಾಗುವದನ್ನು ಕಂಡು ಆನಂದಿಸುತ್ತಿದ್ದಳು.

ಈ ಪ್ರಯೋಗಗಳಿಗೆ ನೀವು ಅಪರಾಧಿಗಳನ್ನೇಕೆ ಉಪಯೋಗಿಸುವದಿಲ್ಲವೆಂದು ವೆಂಟಳು ಕೇಳಿದಳು. ಪ್ರಯೋಗವಸ್ತುವಾಗಿ ಅಲ್ಲಿ ವಿಲಿ ವಿಲಿ ಒದ್ದಾಡುತ್ತಿರುವ ನಾಯಿಯ ಸ್ಥಳದಲ್ಲಿ ಪ್ರೊಫೆಸರನೇ ಆ ಯಮಯಾತನೆಗೆ ಗುರಿಯಾದರೆ ಕಾಣಬಹುದಾದ ದೃಶ್ಯವನ್ನು ಅವಳು ಮನಸ್ಸಿನಲ್ಲಿಯೆ ಕಲ್ಪಿಸಿದಳು. ಅವನು ಆಗಾಗ ವೆಂಟಳಿಗೆ ಯುದ್ಧದ ಸುದ್ದಿಯನ್ನು ಹೇಳುವದಾದರೂ ತಮ್ಮ ವೈರಿಗಳ ಅನನ್ವಿತ ಅತ್ಯಾಚಾರಗಳನ್ನು ಬಣ್ಣಿಸುವದಕ್ಕಾಗಿಯೇ. ಅವನು ಆಕೆಗೆ ಹೇಳುತ್ತಿದ್ದ ಕತೆಗಳೆಲ್ಲೆಲ್ಲ ಮಿತ್ರರಾಷ್ಟ್ರಗಳ ಬಗ್ಗೆ ದ್ವೇಷವು ಓತಪ್ರೋತವಾಗಿ ತುಂಬಿರುತ್ತಿತ್ತು. ಬ್ರಿಟಿಶರ ಪಾಶವೀ ಕೃತ್ಯಗಳನ್ನು ಬಣ್ಣಿಸುವಾಗ ಅವನು ತನ್ನ ಕಲ್ಪನೆಯ ಕುದುರೆಗೆ ಕಡಿವಾಣವನ್ನೇ ಉಪಯೋಗಿಸುತ್ತಿರಲಿಲ್ಲ. ವೆಂಟಳು ಅವನ ಈ ಕತೆಗಳನ್ನು ದಿನಾಲು ಕೇಳಿ, ಅವನು ತಂದು ಕೊಟ್ಟ ಪುಸ್ತಕಗಳನ್ನು ಓದಿದಾಗ ಅವಳ ಮನಸ್ಸಿನಲ್ಲಿಯೂ ಆಗ ಇಡೀ ಜರ್ಮನಿಯನ್ನೇ ವ್ಯಾಪಿಸಿದ ಬ್ರಿಟಿಶ ದ್ವೇಷವು ಮನೆಮಾಡಹತ್ತಿತು.

ಆದರೆ ಇದ್ದಕ್ಕಿದ್ದಂತೆಯೆ ಒಂದಿನ ಅವಳಲ್ಲಿ ಸ್ಥಿತ್ಯಂತರವು ಸಂಭವಿಸಿತು. ಅದೇನೆಂಬುದು ಪ್ರೊಫೆಸರನಿಗೂ ಸ್ಪಷ್ಟವಾಗಲಿಲ್ಲ. ಅವಳಲ್ಲಿಯ

ಉದ್ದಾಮ ಕ್ರೌರ್ಯವು ಒಮ್ಮೆಂದೊಮ್ಮೆಲೆ ನಷ್ಟವಾಗಿ ಸ್ತ್ರೀ ಸಹಜವಾದ್ದ ಮಾರ್ದವವು ತಲೆದೋರಿತು. ಅವಳ ಆ ಪವಿತ್ರ ಭಾವನೆಯ ಆಳವನು ಪ್ರೊಫೆಸರನು ಅಳೆಯಲಾರದೆ ಹೋದನು.

ಅಂದು ಸಂಜೆಗೆ ಹಾರ್ಟವೆಗನು ಬರ್ಲಿನದಿಂದ ಬಂದನು. ಪ್ರೊಫೆಸರನು ತಾವಿಬ್ಬರೆ ಇರುವ ಸಮಯ ಸಾಧಿಸಿ ವೆಂಟಳಲ್ಲಿ ಆದ ಬದಲಾವಣೆಯನ್ನು ಅವನಿಗೆ ಹೇಳಿದನು. ಹಾರ್ಟವೆಗನಿಗೂ ಏನು ಮಾಡಬೇಕೆಂಬುದು ತೋಚ ಲಿಲ್ಲ. ಆದರೆ ವೆಂಟಳನ್ನು ಕೆಲ ದಿನ ಪರೀಕ್ಷಿಸುವದಾಗಿ ವಚನವಿತ್ತನು.

ಮೊದಮೊದಲು ಹಾರ್ಟವೆಗನಿಗೂ ಏನೂ ಹೊಳೆಯಲಿಲ್ಲ. ಆದರೆ ಒಂದಿನ ಅಕಸ್ಮಾತ್ತಾಗಿ ವೆಂಟಳ ಬದಲಾವಣೆಯ ಕಾರಣವು ಅವನಿಗೆ ತಿಳಿಯಿತು.

ಆಗ ಜನೆವರಿ ತಿಂಗಳು. ಹಾರಬರ್ಗ ಪ್ರದೇಶದಲ್ಲಿ ಚಳಿಗಾಲವಿನೂ ಕೊನೆಗಂಡಿರಲಿಲ್ಲ. ಆದರೆ ಹವೆಯು ಬಹಳೇ ಉತ್ಸಾಹದಾಯಕವಾಗಿತ್ತು. ವೆಂಟಳು ತನ್ನ ಸೂಕ್ಷ್ಮ ದೇಹಸ್ಥಿತಿಯನ್ನೂ ಲಕ್ಷಿಸದೆ ದಿನಾಲೂ ಮಂಜು ಮುಸುಕಿದ ಕಾಡಿದ ಮಾರ್ಗಗಳನ್ನು ಸುತ್ತಿಕೊಂಡು ಬರುತ್ತಿದ್ದಳು.

ಹಾರ್ಟವೆಗನು ಒಂದಿನ ಅವಳನ್ನು ಅನುಸರಿಸಿದನು. ಅವರು ದಾರಿ ಯಲ್ಲಿಯ ಒಂದು ಗುಡಿಸಲಿನ ಮುಂದೆ ಹಾಯ್ದು ಹೋಗುತ್ತಿರುವಾಗ ಒಳ ಗಿನ ಹೆಣ್ಣುಮಗಳು ತನ್ನ ಮಗುವನ್ನೆತ್ತಿಕೊಂಡು ಹೊರಕ್ಕೆ ಬಂದಳು. ಹಾರ ವೆಗನು ವೆಂಟಳಿಗೆ ಬರ್ಲಿನದಲ್ಲಿಯ ಇತ್ತೀಚಿನ ಸುದ್ದಿಯನ್ನು ಹೇಳುತ್ತಿದ್ದ. ಆದರೆ ಅತ್ತಕಡೆಗೆ ಅವಳ ಲಕ್ಷವೇ ಇಲ್ಲವೆಂದು ಅವನಿಗೆ ಹೊಳೆಯಿತು. ಅವ ಳನ್ನು ಆಕರ್ಷಿಸಿದ ವಸ್ತುವನ್ನು ಕಾಣಬೇಕೆಂದು ಅವನು ತಿರುಗಿದಾಗ 'ತಾಯ್ತ ನವೇ ಹೆಂಗಳೆಯರ ಸ್ವಾಭಾವಿಕ ಆಕಾಂಕ್ಷೆ' ಯೆಂದು ಅವಳು ವಟಗುಟ್ಟುತ್ತಿ ದ್ದದ್ದು ಇವನ ಕಿವಿಗೆ ಬಿತ್ತು. ಅದೇ ಗುಡಿಸಲಿನಿಂದ ಹೊರಬಿದ್ದ ಮಗುವಿ ನಲ್ಲಿ ಅವಳ ದೃಷ್ಟಿ ಕೀಲಿಸಿತ್ತು; ಮುಖದಲ್ಲಿ ತಾಯ್ತನದ ಕಳೆ ಹೊರ ಹೊಮ್ಮುತ್ತಿತ್ತು.

"ನಾವು ಸೋತೆವು, ಇನ್ನೂ ಹುಟ್ಟದಿದ್ದ ತನ್ನ ಮಗುವನ್ನು ಅವಳು ಪ್ರೀತಿಸುತ್ತಿದ್ದಾಳೆ" ಎಂದು ಹಾರ್ಟವೆಗ ವ್ಯಸನಪಟ್ಟನು.

ಮನೆಗೆ ಬಂದೊಡನೆ ಹಾರ್ಟವೆಗನು ಈ ಸಂಗತಿಯನ್ನು ಪ್ರೊಫೆಸರ ನಿಗೆ ತಿಳಿಸಿದನು. ವರ್ನರ ಪ್ರೊಫೆಸರನು ವಿಚಾರ ಮಗ್ನನಾದವನಂತೆ ತನ್ನ ಗಡ್ಡ ತುರಿಸಿದ.

“ಇದೇನು ಅನೀಕ್ಷಿತದ ಬದಲಾವಣೆಯಲ್ಲ. ವೆಂಟಳಂಥವಳಲ್ಲಿ ಈ ಬದಲಾವಣೆಯಾಗಬಹುದೆಂದು ನಾನು ಎಣಿಸಿರಲಿಲ್ಲ. ಇದನ್ನು ನಾವು ತಿದ್ದಬಹುದು.”

“ನನಗಿಂತ ನೀವು ಪಂಡಿತರಿರಬಹುದು; ಆದರೆ ಸ್ತ್ರೀಯಲ್ಲಿ ಒಮ್ಮೆ ತಾಯ್ತನದ ಪ್ರೇಮವು ಒಡಮೂಡಿತೆಂದರೆ ಅದನ್ನು ನಷ್ಟಗೊಳಿಸುವದು ಅಸಾಧ್ಯ” ವೆಂದು ನುಡಿದು ಹಾರ್ಟವೆಗನು ಗಹಗಹಿಸಿ ನಕ್ಕನು.

ಪ್ರೊಫೆಸರನು ಅವನನ್ನು ಬರಿ ನೋಡಿದನಷ್ಟೆ. ಪುನಃ ತನ್ನ ವಿಚಾರ ದಲ್ಲಿಯೆ ಮಗ್ನನಾದನು. ಕೆಲ ನಿಮಿಷಗಳಲ್ಲಿ ಒಮ್ಮೆಲೆ ಪುಟಿದೆದ್ದು,

“ನನಗೆ ಉಪಾಯ ಹೊಳೆದಿದೆ. ಅವಳಲ್ಲಿ ಇನ್ನು ಇಪ್ಪತ್ನಾಲ್ಕು ತಾಸು ಗಳಲ್ಲಿ ತನ್ನ ಮಗುವಿನ ಬಗ್ಗೆ ಇಷ್ಟೊಂದು ತಿರಸ್ಕಾರವನ್ನು ಹುಟ್ಟಿಸಿ ಬಿಡುವೆ ನಲ್ಲ,ನಂತರ ತನ್ನ ಹಾಗೂ ತನ್ನ ಆ ಮಗುವಿನ ಘಾತ ಮಾಡದಂತೆ ನಾವು ಅವಳನ್ನು ರಕ್ಷಿಸಬೇಕಾಗುವದು” ಎಂದ.

೯

ಅಂದು ಮಧ್ಯಾಹ್ನದಲ್ಲಿ ವೆಂಟಳು ಆ ಪ್ರೊಫೆಸರನ ವಾಚನಾಲಯದಲ್ಲಿ ಕುಳಿತಿದ್ದಳು. ಕೈಯ್ಯಲ್ಲಿಯ ಪುಸ್ತಕ ಜಾರಿಬಿದ್ದ ಎಚ್ಚರವಿರಲಿಲ್ಲ ಅವಳಿಗೆ. ಈ ಎರಡು ತಿಂಗಳಲ್ಲಿ ತನ್ನಲ್ಲಾದ ಬದಲಾವಣೆಗಳನ್ನು ಅವಳು ನೆನೆದುಕೊಳ್ಳುತ್ತಿದ್ದಳು. ನಿಷ್ಕರುಣೆಯೆಂದು ತನ್ನ ಸ್ನೇಹಿತರಿಗೆ ಪರಿಚಿತೆಯಾದ ಅವಳು ಇನ್ನೂ ಹುಟ್ಟದಿದ್ದ ತನ್ನ ಮಗುವಿಗಾಗಿ ತನ್ನಲ್ಲಿ ಇಷ್ಟೊಂದೇಕೆ ಪ್ರೇಮವು ಉಕ್ಕಿ ಬರುತ್ತಿದೆಂಬುದನ್ನು ತಾನೇ ಅರಿಯದವಳಾಗಿದ್ದಳು.

ತನ್ನ ಮಗು! ಆ ಶಬ್ದಗಳು ಅವಳಲ್ಲಿ ರೋಮಾಂಚವನ್ನೆಬ್ಬಿಸಿದವು. ಅವಳು ಪುನಃ ಆ ಶಬ್ದಗಳನ್ನು ತನ್ನಷ್ಟಕ್ಕೆ ಪುಟಪುಟಿಸಿದಳು. ತನಗೆ ಪ್ರೇಮವು ಗೊತ್ತಿಲ್ಲ; ದ್ವೇಷವಷ್ಟೇ ತಿಳಿದಿದೆಂದು ಅವಳು ಹಾರ್ಟವೆಗನಿಗೆ ಬರ್ಲಿನದಲ್ಲಿ

ಹೇಳಿದ್ದಳು. ಸ್ತ್ರೀಯರೆಂದರೆ ಮಕ್ಕಳನ್ನು ಹೆರುವ ಯಂತ್ರಗಳು ಎಂದು ಕೀಳುಗಳೆದಿದ್ದಳು.

ಆದರೆ ಈಗ ತಾನೇ ತಾಯಿಯಾಗತಕ್ಕವಳಿದ್ದಳು. ತನಗೆ ಮಗುವನ್ನು ಕೊಟ್ಟ ಪ್ರೊಫೆಸರನನ್ನು ಹಾಡಿ ಹರಿಸಿದಳು. ಅವನ ಬಗ್ಗೆ ಇದ್ದ ದ್ವೇಷ ವೆಲ್ಲ ತನ್ನ ಮಗುವನ್ನು ತೋಳ ತೊಟ್ಟಿಲಲ್ಲಿ ಆಡಿಸುವೆನೆಂಬ ಆಕಾಂಕ್ಷೆಯಲ್ಲಿ ತೊಳೆದು ಹೋಗಿತ್ತು.

ತನ್ನ ಕಂದ ಹೇಗಿರಬಹುದು ? ಹೆಣ್ಣು ಕೂಸಾದರೆ ತನ್ನಂತೆ ಸುಂದರಿ ಯಾಗುವದೆಂದು ಭಾವಿಸಿದಳು. ಗಂಡುಮಗುವಾದರೆ?—ಒಮ್ಮೆಲೇ ಅವಳು ಪುಟಿದೆದ್ದು ಕಳಿತಳು. ಅಷ್ಟರಲ್ಲಿ ಪ್ರೊಫೆಸರನು ಪ್ರವೇಶಿಸಿದ.

" ಪ್ರೊಫೆಸರರೆ, ನಾನಿದುವರೆಗೂ ಕೇಳಿಲ್ಲ. ಈ ಮಗುವಿನ ತಂದೆ ಯಾರೆಂಬುದನ್ನು ತಿಳಿಯಲಿಚ್ಛಿಸುತ್ತೇನೆ. "

ಪ್ರೊಫೆಸರನು ದೀರ್ಘವಾಗಿ ಉಸಿರೆಳೆದ. ದೈವವು ಅವನ ಕರತಲಾ ಮಲಕವಾಗಿತ್ತು. ಆದರೂ ಆ ಭಾವನೆಯನ್ನು ಅವನು ಇಟ್ಟುಕೊಳ್ಳಬಾರದು ಎಂದು ನಿರ್ಧರಿಸಿದ. ಉಪೇಕ್ಷೆಯ ನಗುವನ್ನು ಬೀರಿ,

" ಆ ವಿಷಯದ ವಿವರಗಳನ್ನು ನೀನು ತಿಳಿದುಕೊಳ್ಳುವ ಅವಶ್ಯಕತೆ ಯಿಲ್ಲ. ಕರಾರಿನ ನಿನ್ನ ಭಾಗವನ್ನು ನೀನು ಚೆನ್ನಾಗಿ ಪೂರೈಸಿರುವಿ, ನಾವೂ ತಪ್ಪಿಲ್ಲ ಈ ಬಯಕೆಯನ್ನು ನೀನು ಬಿಟ್ಟುಬಿಡುವದೆ ಒಳ್ಳೆಯದು" ಎಂದ.

" ಆದರೆ ತಿಳಿದುಕೊಳ್ಳಬೇಕೆಂದು ನಾನು ಹಟತೊಟ್ಟಿದ್ದೇನೆ. ನಿನ ಪಾಲಿಗೆ ಇದೊಂದು ಯಶಸ್ವಿಯಾಗಲಿರುವ ಪ್ರಯೋಗವಷ್ಟೆ. ಆದರೆ ನನಗೆ ತೀರ ಜೀವಾಳದ ಪ್ರಶ್ನೆಯಾಗಿದೆ. ನನ್ನ ಮಗುವಿನ ಸಲುವಾಗಿ ನಾನು ಅದರ ತಂದೆ ಯಾರೆಂಬುದನ್ನು ತಿಳಿಯಲಿಚ್ಛಿಸುತ್ತೇನೆ. " ಎಂದ ಗದ್ದರಿಸಿದಳು.

ಅವಳ ಈ ಆವೇಶದಿಂದ ಪ್ರೊಫೆಸರನಿಗೆ ಸಮಾಧಾನವಾಯಿತು. ಆದರೆ ತನ್ನ ವಿಚಾರಗಳಲ್ಲಿಯೆ ಮಗ್ನಳಾಗಿದ್ದ ವೆಂಟಳು ಅದನ್ನು ಗಮನಿಸಲಿಲ್ಲ.

" ಅದನ್ನರಿತುಕೊಳ್ಳುವುದರಿಂದ ನಿನಗೆ ಸಂತೋಷವಾಗದು; ಆದರೂ

ಹಟವಿದ್ದರೆ ನನ್ನೊಡನೆ ಬಾ ” ಎಂದು ಅವಳನ್ನು ತನ್ನ ಅಭ್ಯಾಸದ ಕೋಣೆಗೆ ಕರೆದೊಯ್ದನು. ಅವಳು ಒಳಕ್ಕೆ ಬಂದೊಡನೆ ಬಾಗಿಲನ್ನು ಭದ್ರವಾಗಿ ಇಕ್ಕಿದನು. ನಂತರ ಮೇಜಿನ ಮೇಲೆ ಒಟ್ಟಿದ್ದ ಚಿತ್ರಗಳ ಕಟ್ಟೊಂದನ್ನು ಎತ್ತಿಕೊಂಡು ಆ ಕಟ್ಟಿನಲ್ಲಿಯ ಒಂದು ಚಿತ್ರವನ್ನು ಅವಳಿಗೆ ತೋರಿಸಿದನು.

“ಇದೊ, ನಿನ್ನ ಮಗುವಿನ ತಂದೆ ” ಪ್ರೊಫೆಸರ ವರ್ನರನ ಕೈಯಲ್ಲಿಯ ಆ ಚಿತ್ರವನ್ನು ನೋಡಿದ ಕೂಡಲೆ ವೆಂಟಳ ಮುಖ ಬಿಳುಪೇರಿತು. ಅಸ್ಫುಟ ಆಕ್ರಂದನವೊಂದು ಅವಳ ತುಟಿಯಿಂದ ಹೊರಬಿತ್ತು. ಪ್ರೊಫೆಸರನು ಜಾಗರೂಕನಾಗುವ ಮೊದಲೆ ಅವಳು ಮೇಜಿನ ಮೇಲೆ ಚೂರಿಯನ್ನು ಎತ್ತಿಕೊಂಡು ಅವನ ಹೃದಯಕ್ಕೆ ಗುರಿಯಿಟ್ಟಳು. ಅವನೂ ಚಪಲತೆಯಿಂದ ಕೈಮುಂದೆ ಚಾಚಿದ್ದರಿಂದ ಆ ಚೂರಿಯು ಅವನ ಹೃದಯವನ್ನು ಪ್ರವೇಶಿಸದೆ ಭುಜದಲ್ಲಿ ನಟ್ಟಿತು. ಪ್ರಹಾರದ ಆಘಾತದಿಂದ ನೆಲಕ್ಕುರುಳಿದ. ಅವನು ಸಾವರಿಸಿಕೊಂಡು ಎದ್ದು ನಿಂತು ಅವಳ ಮುಂಗೈಯನ್ನು ಬಿಗಿಯಾಗಿ ಹಿಡಿದಿಟ್ಟ.

“ ಎಲೆ ಕುನ್ನಿ ! ” ಎಂದು ಗರ್ಜಿಸಿದ. ಅವಳು ಅವನ ಕೈಯಿಂದ ಪಾರಾಗಬೇಕೆಂದು ಹೆಣಗಿದಳು. ಅವಳ ಕ್ರೂರ ನೋಟವನ್ನು ಕಂಡು ಪ್ರೊಫೆಸರನು ಹೆದರಿದಂತಾದ. ಕೂಡಲೆ ತನ್ನ ಶಕ್ತಿ ಹ್ರಾಸವಾದಂತೆ ಅವಳಿಗೆನಿಸಿತು ; ತತ್ತರಿಸಿದಳು. ಅವನು ಹಿಡಿಯದೆ ಹೋಗಿದ್ದರೆ ಅವಳು ನೆಲಕ್ಕುರುಳಬಹುದಾಗಿತ್ತು.

ಎಚ್ಚರದಪ್ಪಿದ ಅವಳನ್ನು ಪ್ರೊಫೆಸರನು ಅಲ್ಲಿಯೆ ಮಂಚದ ಮೇಲೆ ಮಲಗಿಸಿ ತನ್ನ ಬೆವರನ್ನೊರಿಸಿಕೊಂಡ. ಈ ಹೋರಾಟದಿಂದ ಅವನಿಗೆ ಆಯಾಸವಾಗಿತ್ತು. ಭುಜಕ್ಕೆ ಆದ ಗಾಯದಿಂದ ವೇದನೆ ಹೆಚ್ಚಾಗತೊಡಗಿತ್ತು. ಆದರೂ ವೆಂಟಳು ಮೂರ್ಛೆ ತಿಳಿದೇಳುವ ಮೊದಲೇ ಇಲ್ಲಿಂದ ಅವಳನ್ನು ಸಾಗಿಸಬೇಕೆಂದು ಬಯಸಿ ಪ್ರೊಫೆಸರನು ಪ್ರಯಾಸದಿಂದ ಹೋಗಿ ಮೇಜಿನ ಮೇಲಿನ ಕರೆಗಂಟೆಯನ್ನು ನುಡಿಸಿದ.

“ ವೆಂಟಳನ್ನು ಅವಳ ಕೋಣೆಗೆ ಕರೆದುಕೊಂಡು ಹೋಗು. ಮುಲ್ಲರನನ್ನು ಇಲ್ಲಿಗೆ ಕಳಿಸಿಕೊಡು. ” ಎಂದು ಅವನು ಬಂದ ದಾಸಿಗೆ ಆಜ್ಞಾಪಿಸಿದ.

ಎರಡು ತಾಸುಗಳ ನಂತರ ಹಾರ್ಟವೆಗನು ಬಂದು ಭುಜಕ್ಕೆ ಪಟ್ಟಿ ಕಟ್ಟಿಕೊಂಡ ಪ್ರೊಫೆಸರನನ್ನು ಕಂಡನು. ವರ್ನರನ ಮುಖದಲ್ಲಿ ಸ್ವಲ್ಪ ಅಶಕ್ತತೆ ಕಂಡುಬಂದರೂ ಅವನು ಉತ್ಸಾಹದಿಂದಿದ್ದ. ವೆಂಟಳು ತನ್ನ ಪ್ರಾಣಾಪಹರಣಕ್ಕಾಗಿ ಪ್ರಯತ್ನಿಸಿದ್ದನ್ನು ಸ್ವಲ್ಪದರಲ್ಲಿ ತಿಳಿಸಿದ,

" ಅವಳಿಗೆ ನೀನು ಯಾರ ಚಿತ್ರವನ್ನು ತೋರಿಸಿದಿ " ಎಂದು ಹಾರ್ಟವೆಗ ಪ್ರಶ್ನಿಸಿದ.

ಪ್ರೊಫೆಸರನು ಆ ಚಿತ್ರವನ್ನು ಎದುರಿನ ಮೇಜಿನ ಮೇಲಿಂದ ಎತ್ತಿ ಮೇಜರನಿಗೆ ತೋರಿಸಿದ.

" ಎಂಥ ದೈತ್ಯನು ನೀನು ವರ್ನರ ! " ಎಂದು ಉದ್ಗಾರ ಹೊರಡಿಸಿದನು ಹಾರ್ಟವೆಗ.

ಹಾರ್ಟವೆಗನ ಕೈಯಲ್ಲಿದ್ದದ್ದು ಹ್ಯಾಂಬರ್ಗ ಪ್ರಾಣಿ ಸಂಗ್ರಹಾಲಯದಲ್ಲಿಯ ಭೀಕರ ಗೋರಿಲ್ಲಾನ ಚಿತ್ರವಾಗಿತ್ತು.

## ೧೦

ಆ ಸಲದ ವಸಂತಾಗಮವು ಮಂದಗತಿಯಿಂದಲೇ ಆಯಿತೆಂದು ಹೇಳಬಹುದು. ದೀರ್ಘ ನಿದ್ರೆಯಿಂದೆಚ್ಚತ್ತ ಪ್ರಕೃತಿ ರಮಣಿಯ ಪ್ರಸನ್ನ ಪ್ರಫುಲ್ಲತೆಯು ಕೂಡ ಹಾರಬರ್ಗದಲ್ಲಿಯ ಆ ಮಾನಿನಿಗೆ ನವ ಚೈತನ್ಯವನ್ನು ತಂದುಕೊಡಲಿಲ್ಲ. ಒಳನಟ್ಟಿದ್ದ ಕಣ್ಣುಗಳ ಈ ಕೃಶಾಂಗಿಯು ವೆಂಟಳೆಂದು ಯಾರು ಗುರುತಿಸಬಲ್ಲರು ? ಕಾಡಿನಲ್ಲಿ ಅವಳ ಈ ವಿಕಾರ ಸ್ವರೂಪವನ್ನು ಕಂಡ ರೈತರು ಹೆದರಿ ದೂರಹೋಗುತ್ತಿದ್ದರು. ಹಿಂದಿನ ಪ್ರಕರಣದಲ್ಲಿ ಹೇಳಿದ ಘಟನೆಯು ಸಂಭವಿಸಿದ ನಂತರ ವೆಂಟಳು ತಾಸುಗಟ್ಲೆ ಗೋಡೆ ಗೋಡೆಗಳಿಗೆ ಹಾಯ್ದು ತನ್ನ ಆಕ್ರೋಶವನ್ನೂ, ಆವೇಶವನ್ನೂ ತೋರ್ಪಡಿಸಿ ಸಮೀಪಕ್ಕೆ ಬಂದವರ ಮೇಲೆ ಸಿಟ್ಟಿನಿಂದ ಹರಿಹಾಯ್ದಳು. ಅನ್ನ ನೀರುಗಳನ್ನು ಸ್ವೀಕರಿಸದೆ ಭೂಗತಳಾಗಿ ಬಿದ್ದುಕೊಂಡು ಸಾವನ್ನು ಪ್ರತೀಕ್ಷಿಸುತ್ತಿದ್ದಳು. ಆ ದುಃಖದ ಆವೇಗದಿಂದ ಕೊನೆಗೊಮ್ಮೆ ಬಳಲಿ ಬೆಂಡಾಗಿ ನಿದ್ದೆ ಹೋದಳು. ಆ ನಿದ್ದೆ ತಿಳಿದೇಳುವಾಗ ಅವಳು ಅರೆಜೀವವಾಗಿದ್ದಳು. ಅಂದಿನಿಂದ ಮೈ ಹಿಡಿಯದೆ ಹಾಗೇ ಉಳಿದಿದ್ದಾಳೆ.

ಪ್ರೊಫೆಸರನ ದರ್ಶನವೊಂದೆ ಅವಳನ್ನು ಕೆರಳಿಸುತ್ತಿತ್ತು. ಅವನನ್ನು ಕಂಡೊಡನೆ ಸಿಟ್ಟಿಗೆದ್ದ ನಾಗಿಣಿಯಂತೆ ಫೂತ್ಕರಿಸುತ್ತ ಸೇಡು ತೀರಿಸಿ ಕೊಳ್ಳಲು ಹವಣಿಸುತ್ತಿದ್ದಳು. ಇಬ್ಬರು ದಾಸಿಯರಿಗೂ ಅವಳು ಅಸು ಗೊಳ್ಳುತ್ತಿರಲಿಲ್ಲ. ಪ್ರೊಫೆಸರನು ಹಿಂತಿರುಗಿ ತೀರ ಸಂತೋಷ ಸಮಾಧಾನ ದಿಂದ ಹಾರ್ಟವೆಗನಿಗೆ ವೆಂಟಳ ಪರಿಸ್ಥಿತಿಯನ್ನು ಅರುಹುತ್ತಿದ್ದ.

"ಇದಕ್ಕಿಂತ ಯಶಸ್ವಿಯಾಗಲು ಸಾಧ್ಯವಿಲ್ಲ. ಆ ಮಗುವಿನಲ್ಲಿ ದ್ವೇಷ ಪ್ರತೀಕಾರಗಳೇ ತುಂಬಿಕೊಳ್ಳುವವು. ನಮ್ಮ ಕಲ್ಪನೆ ವಿಚಾರ ಪ್ರಯೋಗವು ಯಶಸ್ವಿಯಾಗಲಿದೆ" ಎಂದು ಪ್ರೊಫೆಸರನು ಹೇಳುತ್ತಿದ್ದ.

ಕೊನೆಗೆ ಒಂದು ರಾತ್ರಿ ಬಿರುಗಾಳಿಯು ಸುಯ್ಯೆಂದು ಬೀಸುತ್ತ ಉನ್ನತ ಪರ್ವತಗಳ ಹಿಮಕಣಗಳನ್ನು ಹಾರಿಸಿ ಬೆಳ್ಳಿ ಮೋಡಗಳನ್ನು ಆಕಾಶದಲ್ಲಿ ತೋರಿಸುತ್ತಿರುವಾಗ ಹಾರ್ಟವೆಗನು ಉತ್ಕಂಠೆಯಿಂದ ಕುಳಿತಿದ್ದ ಕೋಣೆಗೆ ಪ್ರೊ, ವರ್ನರನು ಧಾವಿಸಿ ಬಂದನು.

"ಏನಾಯಿತು ?" ಎಂದು ಹಾರ್ಟವೆಗ ಪ್ರಶ್ನಿಸಿದ,

"ರತ್ನದಂಥ ಗಂಡು ಮಗು. ಮುದ್ದು ಮುದ್ದಾದ ಅವಯವಗಳು· ಪಿತೃಭೂಮಿಯ ಗೌರವವನ್ನು ಹೆಚ್ಚಿಸಲು ಚಿರಕಾಲ ಬಾಳಲಿ." ಎಂದ ವರ್ನರ.

"ಆ ಕೂಸಿನ ತಾಯಿ"

"ತಾಯಿ ? ಓ ಅವಳು ನಮ್ಮನ್ನು ಪೀಡಿಸಲಾರಳು. ಅವಳು ಇನ್ನಿಲ್ಲ" ಎಂದು ವರ್ನರನು ಎರಡು ಗ್ಲಾಸುಗಳಲ್ಲಿ ಸುರೆಯನ್ನು ಸುರಿದ

# ಮಗು

—: ೧೯೨೮ :—

ಮಧ್ಯಾಹ್ನದ ಸೂರ್ಯನು ಶಾಲೆಯ ಕೋಣೆಯಲ್ಲಿ ಜಾರುತ್ತಿದ್ದನು. ಒಳಗೆ ಡೆಸ್ಕುಗಳ ಎದುರಿಗೆ ಸಾಲುಸಾಲಾಗಿ ಕುಳಿತಿದ್ದ ವಿದ್ಯಾರ್ಥಿಗಳಲ್ಲಿ ಕೆಲವರು ಕಿಟಕಿಯೊಳಗಿಂದ ಹೊರಗಿನ ಶುಭ್ರ ನೀಲಿಮಾಕಾಶವನ್ನೊಮ್ಮೆ ನೋಡುತ್ತಿದ್ದರೆ ಇನ್ನೊಮ್ಮೆ ವರ್ಗದಲ್ಲಿಯ ಶಿಕ್ಷಕರ ಹಿಂದಿನ ಗೋಡೆಗೆ ನೇತುಹಾಕಿದ್ದ ಗಡಿಯಾರವನ್ನು ನೋಡುತ್ತಿದ್ದರು. ಆಗಿನ್ನೂ ಮೂರೂ ಕಾಲು ಗಂಟೆಯಾಗಿತ್ತು. ಇನ್ನೂ ಮುಕ್ಕಾಲು ತಾಸು ಈ ಬಂಧನದಲ್ಲಿ ಕಳೆದ ನಂತರ ಸ್ವಾತಂತ್ರ್ಯ !

ಶಿಕ್ಷಕನು ಚಕ್ರಬಡ್ಡಿಯ ಗಣಿತವನ್ನು ಹೇಳಿ ಕೊಡುತ್ತಿದ್ದನು. ಉರಿ ಬಿಸಿಲಿನ ಬೇಗೆಯಿಂದ ಬೆಂಡಾಗಿದ್ದರೂ ಕೆಲವು ವಿದ್ಯಾರ್ಥಿಗಳು ಡೆಸ್ಕಿನ ಮೇಲೆ ಬಾಗಿ ಶಿಕ್ಷಕನು ಕೊಡುತ್ತಿದ್ದ ವಿವರಣೆಯನ್ನು ಚಿತ್ತವಿಟ್ಟು ಆಲಿಸುತ್ತಿದ್ದರು: ಇತರರು ಶಿಕ್ಷಕನ ಪಾಠಕ್ಕೆ ಚಿತ್ತವೀಯದೆ ಬರಿ ಶೂನ್ಯ ದೃಷ್ಟಿಯಿಂದ ಏನನ್ನೋ ಅಲೋಕಿಸುತ್ತಿದ್ದರು.

ಆ ವರ್ಗದ ತೀರ ಹಿಂದಿನ ಮೂಲೆಯಲ್ಲಿ ಕುಳಿತಿದ್ದ ಇಬ್ಬರು ವಿದ್ಯಾರ್ಥಿಗಳು ತಮ್ಮಲ್ಲೊಬ್ಬನು ಡೆಸ್ಕಿನಲ್ಲಿ ಮುಚ್ಚಿಟ್ಟಿದ್ದ ವಸ್ತುವಿನಿಂದ ಆಕರ್ಷಿತರಾಗಿದ್ದರು. ಗಣಿತದ ರೀತಿಯನ್ನು ವಿವರಿಸಲು ಶಿಕ್ಷಕನು ಕರಿ ಹಲಿಗೆಯ ಕಡೆಗೆ ಮುಖ ತಿರುಗಿಸಿದೊಡನೆ ಇವರು ತಮ್ಮ ಡೆಸ್ಕನ್ನು ಸದ್ದಾಗದಂತೆ ತೆರೆದು ಒಳಗೆ ಬಚ್ಚಿಟ್ಟಿದ್ದ ವಸ್ತುವನ್ನು ಆತುರದಿಂದ ದಿಟ್ಟಿಸುತ್ತಿದ್ದರು.

ಅಂದಿನ ವಿಷಯವೇ ಸ್ವಲ್ಪ ಕಠಿಣವಾಗಿತ್ತು.

“ ಮೊದಲಿಗೆ ನಿಮಗೆ ಕೊಟ್ಟ ಅಸಲಿನ ರಾಸನ್ನು ಮನದಂದು ಒಂದು ಅಸಲಿಗೆಷ್ಟು ರಾಸಾಗುವುದು. ಎಂಬುದನ್ನು ತ್ರೈರಾಶಿಕದಿಂದ ಕಂಡು ಹಿಡಿಯಬೇಕು. ನಂತರ ಒಂದು ಅಸಲಿಗೆ ಇಷ್ಟು ಎಂದು ಬಂದ ರಾಸಿನ ಅಂಶ

ಚ್ಛೇದಗಳ ವರ್ಗಮೂಲ ತೆಗೆಯಬೇಕು" ಎಂದು ಹೇಳುತ್ತ ಶಿಕ್ಷಕನು ಕರಿ ಹಲಗೆಯ ಮೇಲೆ ಕೆಲವು ಸಂಖ್ಯೆಗಳನ್ನು ಬರೆದ ನಂತರ ವಿದ್ಯಾರ್ಥಿಗಳ ಕಡೆಗೆ ತಿರುಗಿದ. ವಿದ್ಯಾರ್ಥಿಗಳು ಆ ಸಂಖ್ಯೆಗಳನ್ನು ಬರೆದುಕೊಂಡಿದ್ದರು. ಆದರೆ ಅಂದಿನ ಬಿಸಲಿನ ಬೇಗೆಗೆ ವಿದ್ಯಾರ್ಥಿಗಳಲ್ಲಿ ಆಲಸ್ಯವುಂಟಾಗಿತ್ತು. ಕರಿ ಹಲಗೆಯ ಮೇಲೆ ಬರೆದ ಗಣಿತವನ್ನು ಪೂರ್ಣ ಬಿಡಿಸಿ ಉತ್ತರಿಸುವುದು ವಿದ್ಯಾರ್ಥಿಗಳಿಗೆ ಸಾಧ್ಯವಾಗಲಿಲ್ಲ.

"ಕಳ್ಳರೆ, ಇಂದೇನು ನೀವೆಲ್ಲ ನಿದ್ದೆ ಹೋಗಿದ್ದೀರಾ ? ಎಲ್ಲಿ, ಓಪೆನ ಹೀಮ, ನೀನು ಉತ್ತರ ಹೇಳು ನೋಡೋಣ" ಎಂದು ಶಿಕ್ಷಕನು ಆರಚಿದ.

ಜಾಣತನದ ಕಳೆಯುಳ್ಳ ಆ ಯಹೂದಿ ಹುಡುಗನು ಹುಬ್ಬುಗಂಟಿಕ್ಕಿ ಕೆಲವು ಗುಣಾಕಾರ ಭಾಗಾಕಾರಗಳನ್ನು ಮಾಡಿ ಒಮ್ಮೆಲೆ ಪುಟಿದೆದ್ದು ನಿಂತ್ತ

"ನನ್ನ ಉತ್ತರ ಬಂತು ಸರ್, ಕರಿ ಹಲಿಗೆಯ ಮೇಲೆ ಬಿಡಿಸಿ ತೋರಿಸಲೋ?" ಎಂದನು.

"ಆಗಲಿ, ಬಾ" ಎಂದು ಶಿಕ್ಷಕನು ಉತ್ತೇಜನವಿತ್ತ.

"ಇಷ್ಟಕ್ಕೆ ಇಷ್ಟು ರಾಸಾಗಬೇಕಾದರೆ ಒಂದು...." ಎಂದು ಓಪನ ಹೀಮನು ಇನ್ನೂ ಕರಿಹಲಿಗೆಗೆ ಖಡುವನ್ನು ಮುಟ್ಟಿಸುವ ಮೊದಲೆ ಭಯಂಕರ ಸಪ್ಪಳವು ಕೇಳಿಸಿತು. ಶಿಕ್ಷಕನು ವಿದ್ಯಾರ್ಥಿಗಳನ್ನು ಕೆಂಗಣ್ಣಿನಿಂದ ನೋಡಿ "ಇದೇನು? ಸದ್ದು ಮಾಡಿದವರಾರು ?" ಎಂದು ಗರ್ಜಿಸಿದ.

ಒಂದೆರಡು ನಿಮಿಷದ ಮೌನದ ನಂತರ ಕೊನೆಯ ಡೆಸ್ಕಿನ ಮೇಲೆ ಕುಳಿತಿದ್ದವನೊಬ್ಬನು ಎದ್ದು ನಿಂತು ತನ್ನ ಕೈ ಬೆರಳು ಆರ್ನಾಲ್ಡ ಹಾರ್ಟವೆಗನ ಡೆಸ್ಕಿನಲ್ಲಿ ಸಿಕ್ಕು ಜಜ್ಜಿ ಹೋದವೆಂದು ನಡುಗುತ್ತ ಹೇಳಿದನು.

"ಅವನಲ್ಲ ಸರ್, ನಾನೇ ನನ್ನ ಡೆಸ್ಕಿನ ಬಾಗಿಲನ್ನು ಅವನ ಕೈಮೇಲೆ ಅಪ್ಪಳಿಸಿದೆ" ಎಂದು ಸ್ಪಷ್ಟವಾಗಿ ಮಧುರ ದನಿಯಲ್ಲಿ ಆರ್ನಾಲ್ಡನು ಹೇಳಿದ ಇಡೀ ವರ್ಗವೇ ಅವರನ್ನು ನೋಡಹತ್ತಿತು. ಆರ್ನಾಲ್ಡನ ಸುಂದರ ಮುಖದ ಮೇಲೆ ಸಮಾಧಾನದ ಕಳೆಯಿತ್ತು.

"ನೀನೇ ಆರ್ನಾಲ್ಡ, ವರ್ಗದಲ್ಲಿ ದಂಗೆ ಹಾಕಿದ್ದಕ್ಕೆ ನಿನ್ನನ್ನು ಎಷ್ಟು ಸಲ ಶಿಕ್ಷಿಸಲಿ. ನಿನ್ನ ಗೆಳೆಯನನ್ನು ಹಾಗೆ ಹಿಂಸಿಸುವದೆಂದರೇನು ? ಪಾಠ

ನಡೆದಾಗ ಅವನ ಡೆಸ್ಕಿನಲ್ಲಿ ನೀನೇನು ನೋಡುತ್ತಿದೆ ಸ್ವಾರ್ಜ? ನಿನ್ನದೂ ಅದೇ ತಪ್ಪು "

ಸ್ವಾರ್ಜನು ತೆಪ್ಪಗೆ ನಿಂತಿದ್ದ.

" ಅವನ್ನು ನನ್ನ ಡೆಸ್ಕನ್ನು ತೆರೆದು ನೋಡುವನೆಂದು ನಾನೇ ಹಾಗೆ ಅಪ್ಪಳಿಸಿದೆ. " ಅರ್ನಾಲ್ಡನ ಉತ್ತರ.

" ಅಂಥದೇನನ್ನು ಇಟ್ಟಿರುವಿ ಡೆಸ್ಕಿನಲ್ಲಿ ? "

ಈ ಸಲ ಅರ್ನಾಲ್ಡನು ಉತ್ತರಿಸಲಿಲ್ಲ. ಆದರೆ ಸಿಟ್ಟಿನಿಂದ ಅವನ ಮುಖ ಕೆಂಪೇರಿತ್ತು. ಇವನು ಸುಮ್ಮನಿದ್ದದ್ದು ಕಂಡು ಶಿಕ್ಷಕನು ಪುನಃ ಕಿರಚಿದ.

" ಎಲ್ಲಿ, ತೆರೆ ನಿನ್ನ ಡೆಸ್ಕನ್ನು. ಈ ಕಿಡಿಗೇಡಿತನ ನಿಲ್ಲಲಿ."

" ತೆರೆದರೆ ಅದು ಹಾರಿಹೋಗುವದು " ಎಂದ ಅರ್ನಾಲ್ಡ, ಶಿಕ್ಷಕನಿಗೆ ತಲೆಬಾಗದೆ.

" ಏನು ಹಾರಿಹೋಗುವದು ? ನೀನಾಗಿಯೆ ತೆರೆಯುವೆಯೊ ಇಲ್ಲವೆ ನಾನೇ ಬರಬೇಕೋ ? " ಎಂದು ಹೆದರಿಸಿದನು.

ಅರ್ನಾಲ್ಡನು ಒಂದೆರಡು ನಿಮಿಷ ಮೀನ ಮೇಷ ಮಾಡಿ ಶಿಕ್ಷಕನೇನೂ ತನ್ನನ್ನು ಬಿಡುವದಿಲ್ಲೆಂದು ಹೊಳೆದ ಕೂಡಲೆ ಇದುವರೆಗೆ ಎಲ್ಲರ ಕುತೂಹಲ ವನ್ನು ಕೆರಳಿಸಿದ್ದ ತನ್ನ ಡೆಸ್ಕನ್ನು ತೆರೆದ ಕೂಡಲೆ ಬಲಿತ ಗಂಡುಗುಬ್ಬಿ ಯೊಂದು ರೆಕ್ಕೆಗಳನ್ನು ಫಡಫಡಿಸುತ್ತ ಶಿಕ್ಷಕನ ಮುಖಕ್ಕೆ ಡಿಕ್ಕಿ ಹೊಡೆದು ಹಾರಿಹೋಯಿತು. ಈ ಅನಿರೀಕ್ಷಿತ ದಾಳಿಯಿಂದ ಶಿಕ್ಷಕನು ತೂಕತಪ್ಪಿ ನೆಲಕ್ಕೆ ಬೀಳುವದರಲ್ಲಿದ್ದನು. ಆದರೆ ಚೇತರಿಸಿಕೊಂಡ ಕೂಡಲೆ ಅರ್ನಾ ಲ್ಡನನ್ನು ಹರಿದು ತಿನ್ನುವವರಂತೆ ನೋಡಿದನು. ಆದರೆ ಅರ್ನಾಲ್ಡನು ಕಿಟಕಿಯೊಳಗಿಂದ ಸಂತೋಷದಿಂದ ಹಾರಿಹೋದ ಗಂಡು ಗುಬ್ಬಿಯನ್ನು ವಿಷಾದದಿಂದ ನೋಡುತ್ತಿದ್ದನು.

" ಆ ಗುಬ್ಬಿಯನ್ನೇಕೆ ನಿನ್ನ ಡೆಸ್ಕಿನಲ್ಲಿ ತಂದಿಟ್ಟದ್ದೆ ? ಜೀವಂತ ಪ್ರಾಣಿಗಳನ್ನು ವರ್ಗದಲ್ಲಿ ತರಬಾರದೆಂಬುದು ನಿನಗೆ ತಿಳಿದಿಲ್ಲವೆ ? ಅದು ಡೆಸ್ಕಿನಲ್ಲಿ ಗಾಳಿಯಿಲ್ಲದೆ ಉಸಿರುಗಟ್ಟಿ ಸತ್ತು ಹೋಗುತ್ತಿತ್ತಲ್ಲ ? "

“ ಅವನ್ನೇ ನೋಡಬೇಕೆಂದು ತಂದಿದ್ದೆ. ಗಾಳಿಯಿಲ್ಲದೆ ಅದೆಷ್ಟು ಹೊತ್ತು ಆ ಗುಬ್ಬಿ ಬದುಕುವದು ಎಂಬುದನ್ನು ನಾನು ನೋಡಬೇಕೆಂದಿದ್ದೆ. ಆದರೆ ಈ ಮೂರ್ಖನು ಆಗಾಗ ಡೆಸ್ಕನ್ನು ತೆರೆದು ಅದಕ್ಕೆ ಗಾಳಿಯನ್ನು ಕೊಡುತ್ತಿದ್ದ. ಆದ್ದರಿಂದಲೆ ನಾನು ಅವನ ಕೈಮೇಲೆ ಬಾಗಿಲನ್ನು ಅಪ್ಪಳಿಸಿದ್ದು ” ಎಂದು ಅರ್ನಾಲ್ಡನು ಉತ್ತರಿಸಿ ಶಿಕ್ಷಕನು ತನ್ನ ನಡತೆಯನ್ನು ಮೆಚ್ಚುವನೆಂದೇ ಅವನ ಕಡೆಗೆ ನೋಡಿದನು. ಆದರೆ ಶಿಕ್ಷಕನಲ್ಲಿ ಬೇಸರ ಮೂಡಿತ್ತು.

“ ಇನ್ನು ರಜೆಯ ಎರಡು ದಿನಗಳಲ್ಲಿ ನಿನ್ನನ್ನು ಹೊರಗೆ ಬಿಡುವದಿಲ್ಲ. ಸ್ಪ್ರಾರ್ಜ, ಈ ವಾರದ ನಿನ್ನ ಸದ್ವರ್ತನೆಯ ಗುಣಗಳನ್ನೆಲ್ಲ ಕಡಿದು ಹಾಕಿದೆ. ಇನ್ನು ಮುಂದೆ ಪಾಠ ಸಾಗಿಸೋಣ ” ಎಂದನು.

ಶಿಕ್ಷಕನು ಪುನಃ ಪಾಠ ಹೇಳಲು ಪ್ರಯತ್ನಿದನೇನೊ ನಿಜ. ಆದರೆ ಅವನಲ್ಲಿ ಏಕಾಗ್ರತೆಯೇ ಉಳಿಯಲಿಲ್ಲ. ಅರ್ನಾಲ್ಡನು ಅವನಿಗೊಂದು ಸಮಸ್ಯೆಯಾಗಿ ತೋರಿದನು. ಪುರುಷವೇಷದ ರತಿಯಂತಿದ್ದ ಈ ಮುದ್ದು ಬಾಲಕನಲ್ಲಿ ಇಷ್ಟೊಂದು ಕ್ರೌರ್ಯವೆಂತು ಇದೆಂಬುದರ ಗೂಢವೇ ಅವನಿಗೆ ಹೊಳೆಯಲಿಲ್ಲ. ಇಷ್ಟೇ ಅಲ್ಲ, ಅರ್ನಾಲ್ಡನಿಗೆ ತಾನು ಪ್ರಕೃತಿಮಯದ ವಿರುದ್ಧವಾಗಿ ಕೌರ್ಯದಿಂದ ನಡೆದುಕೊಳ್ಳುತ್ತಿದ್ದೇನೆಂಬುದರ ಅರಿವೇ ಇರು ವಂತೆ ತೋರಲಿಲ್ಲ. ದುಷ್ಕೃತ್ಯಗಳಿಗಾಗಿ ಅವನನ್ನು ಅನೇಕ ಸಲ ಶಿಕ್ಷಿಸಿದ್ದರೂ ಎಲ್ಲ ವ್ಯರ್ಥವಾಗಿತ್ತು. ಅವನು ಶಿಕ್ಷೆಯನ್ನೂ ನಿರ್ವಿಕಾರವಾಗಿ ಭೋಗಿಸುತ್ತಿದ್ದ. ಒಟ್ಟಾರೆ, ಅವನಲ್ಲಿ ಹೃದಯವೇ ಇದ್ದಂತೆ ತೋರಲಿಲ್ಲ.

ಅವನನ್ನು ಮೂರ್ಖನೆನ್ನಬೇಕೆ ? ಹಾಗೂ ಇರಲಿಲ್ಲ. ಮನಸು ಬಂದಾಗ ಅವನು ಕಾಸುಗಟ್ಲೆ ದುಡಿಯುವ ಓಪನಹಿಮರಂಥ ಜಾಣ ದೆ ವಿದ್ಯಾರ್ಥಿಗಳನ್ನು ಲೀಲೆಯಿಂದ ಕೆಳಕ್ಕೆ ತಳ್ಳಿ ವರ್ಗದಲ್ಲಿ ಮೊದಲನೆಯವನಾಗಿ ಮೆರೆಯುತ್ತಿದ್ದ. ಅವನು ಪ್ರತಿಯೊಂದು ಕಾರ್ಯವನ್ನು ಅಲಕ್ಷದಿಂದಲೆ ಮಾಡುವಂತೆ ತೋರುತ್ತಿತ್ತು. ಆದರೆ ಹಿರಿಯ ವಿದ್ಯಾರ್ಥಿಗಳ ಕತ್ತಿ ವರಸೆಯಾಟವನ್ನು ನೋಡಲು ಅವಕಾಶ ದೊರೆತಾಗ ಮಾತ್ರ ಅವನ ಮೈ ತುಂಬಿ ಬರುತ್ತಿತ್ತು. ಆ ಪಂದ್ಯದಲ್ಲಿ ಯಾವನೊಬ್ಬ ವಿದ್ಯಾರ್ಥಿಗೆ ಗಾಯ

ವಾಗಿ ನೆತ್ತರು ಸುರಿಯತೊಡಗಿದರೆ ಅದನ್ನು ಕಂಡು ಇವನು ಪರವಶನಾಗುತ್ತಿದ್ದ. ಅದೊಂದನ್ನು ಬಿಟ್ಟರೆ ಇವನನ್ನಾಕರ್ಷಿಸುವ ಬೇರೆ ವಸ್ತುವೆ ಇದ್ದಿಲ್ಲವೆಂದು ಹೇಳಬಹುದು.

ಶಿಕ್ಷಕನು ಗಡಿಯಾರವನ್ನು ನೋಡಿದ. ನಾಲ್ಕು ಗಂಟೆಯಾಗಿತ್ತು. ವರ್ಗವನ್ನು ವಿಸರ್ಜಿಸಿದ. ನೋಡನೋಡುವಷ್ಟರಲ್ಲಿಯೇ ಅರ್ನಾಲ್ಡನು ನೆಗೆದು ಎಲ್ಲ ಹುಡುಗರಿಗಿಂತ ಮುಂದಾಗಿ ವರ್ಗದಿಂದ ಹೊರಬಿದ್ದು ಪಾರಾಗಿದ್ದ. ಶಿಕ್ಷಕನು ಅವನನ್ನು ಕೂಗಿದ್ದೂ ಅವನಿಗೆ ಕೇಳಿಸಲಿಲ್ಲ.

ಸ್ವಾರ್ಜನು ಶಾಲೆಯ ಆವಾರದ ಹೊರಗೆ ಬಂದೊಡನೆ ಅರ್ನಾಲ್ಡನು ಅವನನ್ನು ತಡೆದು ಅವನ ಎರಡೂ ಕೈಗಳನ್ನು ಬೆನ್ನಹಿಂದೆ ಬಲವಾಗಿ ಹಿಡಿದುಕೊಂಡು ಒದೆತಗಳನ್ನು ಕೊಡಲು ಪ್ರಾರಂಭಿಸಿದ. ಇವನ ಒದೆತಗಳನ್ನು ತಾಳಲಾರದ ಸ್ವಾರ್ಜನು ನೆಲಕ್ಕುರುಳಿಸಿದ.

“ನನ್ನ ಮೋಜು ಕೆಡಿಸಿದ ನಿನಗೆ ಇದೇ ಶಿಕ್ಷೆ” ಎಂದು ಅರ್ನಾಲ್ಡ ಬಿರಬಿರನೆ ಹೊರಟು ಹೋದ. ನೆಲಕ್ಕೆ ಬಿದ್ದವನ ಗತಿಯೇನಾಗಿದೆಂಬುದನ್ನು ಸಹ ನೋಡಲಿಲ್ಲ. ಅಲ್ಲಿದ್ದ ಉಳಿದ ವಿದ್ಯಾರ್ಥಿಗಳುತ್ಸಾಹದಿಂದ ಹಿಂಬಾಲಿಸಿದರು.



ಬೇಸಿಗೆಯ ರಜೆಯಲ್ಲಿ ಅರ್ನಾಲ್ಡನು ಗೋಸ್ವಾರ ಹಳ್ಳಿಯಲ್ಲಿಯ ತನ್ನ ತಂದೆಯ ಕಡೆಗೆ ನಡೆದನು. ಅರ್ನಾಲ್ಡನನ್ನು ಕರೆದೊಯ್ಯಲು ಗೋಸ್ವಾರ ನಿಲ್ದಾಣಕ್ಕೆ ಬಂದಿದ್ದ ಕಾರು ಅವನನ್ನು ಒಯ್ದು ಮನೆಯ ಮುಂದಿಳಿಸಿದ ಕೂಡಲೆ ಅವನು ತನ್ನ ತಂದೆಯು ನರೆಗೂದಲಿನ ಯಾವನೋ ಒಬ್ಬನೊಡನೆ ಸಂಭಾಷಣೆಯಲ್ಲಿ ತೊಡಗಿದ್ದುದನ್ನು ನೋಡಿದನು. ಅವನಿಗೆ ತನ್ನ ತಂದೆಯ ಬಹುಶಃ ಎಲ್ಲ ಸ್ನೇಹಿತರ ಪರಿಚಯವಿದ್ದರೂ ಈ ದೀರ್ಘಕಾಯದ ಪ್ರೌಢನನ್ನು ಇದುವರೆಗೆ ಕಂಡಿರಲಿಲ್ಲ. ಅರ್ನಾಲ್ಡನು ಹೋಗಿ ತಂದೆ ಹಾರ್ಟವೆಗನ ಹಸ್ತಾಂದೋಲನ ಮಾಡಿದನಷ್ಟೆ! ಬೇರೆ ಯಾವ ಸಂಭ್ರಮವನ್ನೂ ತೋರ್ಪಡಿಸಲಿಲ್ಲ.

"ಇವನೋ ಅರ್ನಾಲ್ಡ. ಬೇಗನೆ ಇವನಿನ್ನು ಪ್ರಾರ್ಥನಾಗುವನು." ಎಂದು ಹಾರ್ಟವೆಗನು ನುಡಿದು, "ಆರ್ನಾಲ್ಡ ಇವರು ನನ್ನ ಹಳೆಯ ಗೆಳೆಯ ರಾದ ಪ್ರೊ. ವರ್ನರರು. ನೀನು ಚಿಕ್ಕವನಿದ್ದಾಗ ಇವರನ್ನು ಕಂಡಿದ್ದಿ" ಎಂದು ಆರ್ನಾಲ್ಡನಿಗೆ ಅವರ ಪರಿಚಯು ಮಾಡಿಕೊಟ್ಟನು.

"ನನಗೇನೂ ನೆನಪಿಲ್ಲ. ನಾನು ಕೂಸಿದ್ದಾಗ ನೋಡಿರಬಹುದು. ಎಂದು ಆರ್ನಾಲ್ಡನು ಹಸ್ತಾಂದೋಲನಕ್ಕಾಗಿ ಕೈಚಾಚಿದ.

ಅವನನ್ನೇ ಲಕ್ಷ್ಯಪೂರ್ವಕವಾಗಿ ನಿರೀಕ್ಷಿಸುತ್ತಿದ್ದ ಪ್ರೊಫೆಸರನು ಗಂಭೀರ ವಾಗಿ ಮುಗುಳ್ನಗೆ ಸೂಸಿ "ಹೌದು, ನೀನು ಕೂಸಿದ್ದಾಗಲೇ ನಾನು ನೋಡಿದ್ದು. ನಿನ್ನ ಬೆಳೆಯು ಸಿರಿನೊಳಯುಲ್ಲಿಯೇ ತೋರಿತ್ತು" ಎಂದನು.

ಪ್ರೊಫೆಸರನ ನೋಟವನ್ನು ಕಂಡ ಅರ್ನಾಲ್ಡನಿಗೆ ಅದೇಕೆ ಅವನ ಬಗ್ಗೆ ಒಮ್ಮೆಲೆ ದ್ವೇಷವು ಒಡಮೂಡಿತೋ ಜಗತ್ತಿನಲ್ಲಿ ಅತ್ಯಂತ ದ್ವೇಷ ಪಾತ್ರವಾದ ವಸ್ತುವು ತನಗೆ ಈ ಪ್ರೊಫೆಸರನೊಬ್ಬನೇ ಎಂದು ಅವನಿಗನಿ ಸಿತು. ಇದನ್ನು ಅರ್ನಾಲ್ಡ ಮುಖಚರ್ಯದಿಂದ ಕಂಡು ಹಿಡಿದ. ಹಾರ್ಟ ವೆಗನು ತನ್ನ ಆಳನ್ನು ಕರೆದು,

"ಅರ್ನಾಲ್ಡನ ಸಾಮಾನುಗಳನ್ನು ಒಳಗೆ ಒಯ್ದಿಡು" ಎಂದು ಹೇಳಿದನಂತರ ಅರ್ನಾಲ್ಡ ಪ್ರವಾಸದಿಂದ ನಿನಗೂ ದಣಿವಾಗಿದೆ ಹೋಗು. ಉಪಹಾರ ಸ್ವೀಕರಿಸಿ ದಿವಾಣ ಖಾನೆಯಲ್ಲಿ ಬಂದು ಭೆಟ್ಟಿಯಾಗು" ಎಂದು ಹೇಳಿದ.

ಒಳಹೊಕ್ಕ ಅರ್ನಾಲ್ಡನನ್ನು ಇವರಿಬ್ಬರೂ ನೋಡಿ ಕೆಲನಿಮಿಷ ಮೌನರಾಗಿದ್ದರು.

"ಅವನನ್ನು ಕಂಡು ನಿಮಗೆ ಸಮಾಧಾನವಾಯಿತೆ?" ಎಂದು ಹಾರ್ಟ ವೆಗನೇ ಮೌನವನ್ನು ಭಂಗಿಸಿ ಕೇಳಿದ.

"ಅವನ ಸ್ವಭಾವವನ್ನು ಇನ್ನೂ ಪರೀಕ್ಷಿಸುವವರೆಗೆ ನಾನು ಏನೂ ಹೇಳಲಾರೆ ಅವನ ಮೈಕಟ್ಟು ಜಟ್ಟಿಯದಾಗಿದೆ. ಆದರೆ ಅವನ ಮನಸ್ಸು ನಾನು ಸ್ವಲ್ಪ ನೋಡಬೇಕು." ಎಂದು ಪ್ರೊಫೆಸರನು ಹೇಳಿದ.

" ಇದುವರೆಗೆ ಮಾತ್ರ ಅವನು ನಮ್ಮ ಬಯಕೆಯಂತೆ ಬೆಳೆಯುತ್ತಿದ್ದ. ಅವನಲ್ಲಿ ಯಾವ ಭಾವನೆಯೂ ಇಲ್ಲ. ಯಾವದೂ ಅವನನ್ನು ಆಕರ್ಷಿಸುವದಿಲ್ಲ. ಇವನ ಬಗ್ಗೆ ಶಿಕ್ಷಕರ ದೂರುಗಳನ್ನು ಕೇಳಿ ನನಗೇ ಬೇಸರ ಬಂದು ಬಿಟ್ಟಿದೆ. ಇವನು ಬುದ್ಧಿಶಾಲಿಯಾಗಿದ್ದರೂ ಏಕಾಗ್ರತೆ ಇವನಲ್ಲಿಲ್ಲವೆಂದು ಶಿಕ್ಷಕರ ಅಭಿಪ್ರಾಯವಾಗಿದೆ. ತಪ್ಪು ಒಪ್ಪುಗಳ ಕಲ್ಪನೆಯೇ ಇಲ್ಲ. ಅವನಿಗೆ ನಿರ್ಭೀತನಾದ ಅವನ ಮನೋದಾರ್ಢ್ಯ ಈ ವಯಸ್ಸಿನಲ್ಲಿ ಪ್ರಶಂಸನೀಯವೇ ಸರಿ "

" ಇರಬಹುದು ಅವನಿನ್ನು ಮಗುವಾಗಿದ್ದಾನೆ. ಅವನ ಬೆಳವಣಿಗೆಯ ಮಹತ್ವದ ಭಾಗವಾದ ದ್ವಿತೀಯ ಚಳಕವು ಇನ್ನೂ ಪ್ರಾರಂಭವಾಗಬೇಕಾಗಿದೆ. "

" ದಿವಾನಖಾನೆಗೆ ತೆರಳೋಣ. ಕೆಲಸಂಗತಿಗಳನ್ನು ವಿಚಾರಿಸಬೇಕಾಗಿದೆ. ಇಲ್ಲಿ ಯಾರಾದರೂ ಕದ್ದು ಕೇಳಬಹುದು " ಎಂದು ಪ್ರೊಫೆಸರನನ್ನು ಕರೆದುಕೊಂಡು ಹಾರ್ಟವೆಗನು ದಿವಾನಖಾನೆಗೆ ತೆರಳಿದನು.

ಮರುದಿನ ಮುಂಜಾನೆ ಹಾರ್ಟವೆಗನು ಇಲ್ಲಿಗೆ ಸಮೀಪದಲ್ಲಿರುವ ಸ್ನೇಹಿತಸೀಬರ್ಟನ ಮನೆಗೆ ಹೋಗೋಣವೆಂದು ವರ್ನರನನ್ನು ಅರ್ನಾಲ್ಡನನ್ನೂ ಕರೆದನು, ಆದ್ದರಿಂದ ಅರ್ನಾಲ್ಡ-ಹಾರ್ಟವೇಗರಿಬ್ಬರೆ ಕುದುರೆಗಳನ್ನೇರಿ ಸೀಬರ್ಟನಲ್ಲಿಯೇ ತೆರಳಿದರು. ನಿರ್ಭೀತನಾದ ಅರ್ನಾಲ್ಡನು ಡೌಲಿನಿಂದ ಕುದುರೆಯನ್ನೇರಿ ಸಾಗಿದಾಗ ಆಳುಗಳು ಬೆರಗುಬಟ್ಟು, ಅವನನ್ನೇ ಎವೆಯಿಕ್ಕದೆ ನೋಡುತ್ತಿದ್ದರು.

"ಪ್ರೊಫೆಸರರು ಬರದಿದ್ದದ್ದು ಒಳಿತೇ ಆಯಿತು. ಅವರು ನಮ್ಮ ಮೋಜನ್ನೆಲ್ಲ ಕೆಡಿಸಿಬಿಡುತ್ತಿದ್ದರು. " ಎಂದು ಅರ್ನಾಲ್ಡನು ಕೆಲಕಾಲ ಮೌನದ ನಂತರ ಹೇಳಿದ.

" ಅವನ ಬಗ್ಗೆ ಆದೇಕೆ ಅನಾದರ ? ದೇಶದಲ್ಲಿ ಪ್ರಖ್ಯಾತ ವಿಖ್ಯಾತ ವಿಜ್ಞಾನಿಯವನು. "

"ಆದೇಕೋ ? ನಾನವನನ್ನು ದ್ವೇಷಿಸುತ್ತೇನೆ. ಅವನು ಸದಾ ನನ್ನನ್ನು ಹರಿದು ತಿನ್ನುವವನಂತೆ ನೋಡುತ್ತಿರುವನು."

ಹಾರ್ಟವೆಗನು ಬೆಚ್ಚಿದಂತಾದ. ಅವನು ಉತ್ತರ ಕೊಡಲಿಲ್ಲ. ಅವನು

ತನ್ನ ಪಕ್ಕದಲ್ಲಿಯೇ ಅಶ್ವಾರೋಹಿಯಾಗಿದ್ದ ಅರ್ನಾಲ್ಡನನ್ನು ನೋಡಿದ. ಅವನು ವೆಂಟಲ ಪಡಿಯಚ್ಚಿನಂತಿದ್ದ, ಅವಳ ಸೌಂದರ್ಯಲಾವಣ್ಯಗಳು ಇವನಲ್ಲಿ ಇಳಿದಿದ್ದವು. ಅರ್ನಾಲ್ಡನಿಗೆ ಹಾರ್ಟವೇಗನಿಗೆ ತಂದೆಯೆಂದು ಹೇಳಿಕೊಡಲಾಗಿತ್ತು, ತಾಯಿ ಮಡಿದಿರುವಳು ಎಂದು ಬಿಂಬಿಸಲಾಗಿತ್ತು ಆದ್ದರಿಂದ ಅವನು ಹೆಚ್ಚಿನ ಪ್ರಚ್ಛಾಪಚ್ಚೆಗೆ ಹೋಗಿರಲಿಲ್ಲ.

ಅಷ್ಟರಲ್ಲಿಯೇ ಶೀಬರ್ಗನ ಮನೆ ಬಂದಿದ್ದರಿಂದ ಅವನ ವಿಚಾರ ಚಕ್ರವು ನಿಂತು ಬಿಟ್ಟಿತು. ಇವರಿಗಾಗಿ ದಾರಿಕಾಯುತ್ತ ಬಾಗಿಲಲ್ಲಿ ನಿಂತಿದ್ದ ಸೀಲರ್ಟನು ಇವರನ್ನು ಆದರಿಂದ ಸ್ವಾಗತಿಸಿದನು.

ಎಂಥ ಸುಂದರನಾಗಿ ಬೆಳೆಯುತ್ತಿದ್ದಾನೆ ಬೇಗನೆ! ಇವನು ಕಾಮಿನೀ ಜನ ಚಿತ್ತಾಪಹಾರಕನಾಗುವಲ್ಲಿ ಸಂದೇಹವಿಲ್ಲ" ಎಂದು ಸೀಬರ್ಗನು ಅರ್ನಾಲ್ಡನನ್ನು ಆಚ್ಚರಿಯಿಂದ ನೋಡುತ್ತ ನುಡಿದನು.

ಹಾರ್ಟವೇಗನು ಹುಬ್ಬುಗಂಟಿಕ್ಕಿದ ಈ ವಿಷಯವನ್ನು ನಗೆಚಾಟಿಗೆ ಎಂತಾದರೂ ಅರ್ನಾಲ್ಡನೆದುರು ಚರ್ಚಿಸಲು ಅವನು ಸಿದ್ಧನಿರಲಿಲ್ಲ ಇವನು ಈ ಮಾತು ಬದಲಿಸಬೇಕೆಂಬ ವಿಚಾರದಲ್ಲಿದ್ದಾಗ ಬಾಗಿಲಲ್ಲಿ ಸುಮಾರು ಹತ್ತುವರ್ಷದ ಬಾಲೆಯೊಬ್ಬಳು ಕಾಣಿಸಿಕೊಂಡದ್ದರಿಂದ ಹಾರ್ಟವೆಗನ ಉದ್ದೇಶ ನಿರಾಯಾಸವಾಗಿ ಸಾಧಿಸಿತು.

"ಇಗೊ, ಎಲ್ಸಾ" ಎಂದು ಸೀಬರ್ಟನು ತನ್ನ ಮಗಳನ್ನು ಎತ್ತಿಕೊಂಡನು. ಹೊಸಬರನ್ನು ಅವಳು ಕಂಡು ನಾಚಿದಳು.

ಆ ಬಾಲೆಯು ಅರ್ನಾಲ್ಡನ ಹತ್ತಿರ ಬಂದಳು. ಅಷ್ಟೊಂದು ಎತ್ತರದ ಕುದುರೆಯನ್ನು ಗಂಭೀರವಾಗಿ ಹಿಡಿದುಕೊಂಡು ನಿಂತಿದ್ದ ಅವನನ್ನು ಕಂಡು ಇವನೊಬ್ಬ ಅಸಾಮಾನ್ಯ, ತನ್ನೊಂದನೆ ಕಣ್ಣುಮುಚ್ಚಾಲೆ ಆಡಲಿಕ್ಕೆ ಬರುವಂಥವನಲ್ಲವೆಂದು ಭಾವಿಸಿದಳು ಸೀಬರ್ಟನ ಅಪ್ಪಣೆಯಂತೆ ಆಳುಬಂದು ಕುದುರೆಗಳನ್ನು ಒಯ್ದನಂತರ "ಬಾ, ಈ ಹುಡುಗರು ತಮ್ಮಷ್ಟಕ್ಕೇ ಆಡಿಕೊಳ್ಳಲಿ" ಎಂದು ಸೀಬರ್ಟನು ಹಾರ್ಟವೆಗನನ್ನು ಮನೆಯೊಳಗೆ ಕರೆದೊಯ್ದನು.

ಅವರು ಹೋದ ನಂತರ ಈ ಎಳೆಯರಿಬ್ಬರು ಒಂದೆರಡು ನಿಮಿಷ

ಮೌನವಾಗಿದ್ದರು,

"ನಮ್ಮ ತೋಟದಲ್ಲಿ ಉತ್ತಮ ಸೇಬು ಹಣ್ಣುಗಳಿವೆ," ಎಂದು ಎಲಾ ಮಾತು ಪ್ರಾರಂಭಿಸಿದಳು.

ಈ ಬಾಲೆಯ ಜೊತೆಯಲ್ಲಿ ತನ್ನನ್ನು ಬಿಟ್ಟುಕೊಟ್ಟುಹೋದ ಹಿರಿಯರನ್ನು ಆರ್ನಾಲ್ಡನು ಮನಸ್ಸಿನಲ್ಲಿಯೇ ಬೈದನು. ಹುಡುಗಿಯರನ್ನು ಕಂಡರೆ ಅವನಿಗೆ ಸರಿಬರುತ್ತಿರಲಿಲ್ಲ. ಕೈಲಾಗದ ಈ ಬಾಲೆಯರ ಸಂಗದಿಂದ ತನಗೇನು ಎಂಬಭಾವನೆ ಅವನಲ್ಲಿ ಬೇರೂರಿಬಿಟ್ಟಿತ್ತು.

" ಎಲ್ಲಿವೆ ?" ಎಂದು ಸಾತಂಕಿತನಾಗಿ ಕೇಳಿದ.

" ಬಾ ನಾನು ತೋರಿಸುತ್ತೇನೆ " ಎಂದು ಎಲ್ಸಾಳು ನೆಗೆದಾಡುತ್ತ ಅವನನ್ನು ಎಳೆದುಕೊಂಡೇ ಹೊರಟಳು. ಅವರ ಮನೆಯ ಹಿಂದಿನ ತೋಟದಲ್ಲಿ ಸೇಬು ಹಣ್ಣುಗಳಿಂದು ಬಾಗಿ ಜಗ್ಗುತ್ತಿದ್ದ ಮರಗಳನ್ನು ಕಂಡಾಕ್ಷಣ ಯಾರ ಬಾಯಿಯಲ್ಲಾದರೂ ನೀರೂರದಿರುತ್ತಿರಲಿಲ್ಲ. ಮಾಗಿದ ಈ ಸೇಬು ಹಣ್ಣುಗಳನ್ನು ಕಂಡ ಆರ್ನಾಲ್ಡನ ಎಲ್ಸಾಳ ವಿಚಾರದಲ್ಲಿ ಉಂಟಾಗಿದ್ದ ಅನಾದರ ಭಾವವನ್ನು ಮರತೇ ಬಿಟ್ಟನು.

"ನನಗೆ ಸ್ವಲ್ಪ ಹಣ್ಣು ಬೇಕು ನಿನಗೂ ? ಎಂದು ಕೇಳಿದಳು. ಎಲ್ಸಾ

ಆರ್ನಾಲ್ಡನು ಎಲ್ಸಾಳನ್ನು ನೋಡಿ ನಕ್ಕು ಸರಸರನೆ ಗಿಡವನ್ನು ಹತ್ತಿ ಹಣ್ಣುಗಳನ್ನು ಕಿತ್ತಿ ಎಸೆಯಹತ್ತಿದ ಹಣ್ಣುಗಳು ಕೆಳಗೆ ನೆಲಕ್ಕೆ ಬೀಳದಂತೆ ಎಲ್ಸಾಳು ಉಡಿಯೊಡ್ಡಿ ಅವನ್ನು ಹಿಡಿದುಕೊಳ್ಳುತ್ತಿದ್ದಳು. ಅಹಂಕಾರದ ಮೂರ್ತಿಯಾಗಿದ್ದ ಆರ್ನಾಲ್ಡನಿಗೆ ಕ್ಷಣಮಾತ್ರವಾದರೂ ಸಂಗಾತಿಗೆ ಸಂತೋಷ ನೀಡುವದರ ಆನಂದವೇನು ಎಂಬುವರ ಅನುಭವವಾಯಿತು. ಈ ಹೊಸ ಅನುಭವದಿಂದ ಅವನಿಗೆ ಸ್ವಲ್ಪ ಆಘಾತವಾದಂತಾಯಿತು. ಪರಕೀಯರನ್ನು ಕಂಡು ಸಂತೋಷ ಪಡುವದು ಅವನಿಗೆ ಹೊಸದೆನಿಸಿತು.

ಇದು ವರೆಗೂ ಹೆದರಿಕೊಂಡಿದ್ದ ಎಲ್ಸಾಳು ಅವನು ಕೆಳಗಿಳಿದು ಬಂದು ಕೂಡಲೆ ಅವನನ್ನು ಕೊಂಡಾಡಿದಳು. ತನಗೆ ನಿಲುಕದಾಗದ ಹಣ್ಣುಗಳನ್ನು ಪುಂಗನಂತೆ ಚಪಲತೆಯಿಂದ ಗಿಡವನ್ನೇರಿ ಹರಿದು ಕೊಟ್ಟರೂ ಹೆಚ್ಚಿನ ಪಾಲು ಬೇಕೆಂದು ಹಟತೊಡದ ಇವನ ಬಗ್ಗೆ ಎಲ್ಸಾಳ

ಆದರ ತಾಳಿದಳು. ಈ ಸಂತೋಷದಿಂದ ಅವಳು ಅರ್ನಾಲ್ಡನನ್ನು ಅಪ್ಪಿ ಕೊಂಡಳೆಂದೇ ಹೇಳಬಹುದು.

ಅಷ್ಟರಲ್ಲಿ ಸೀಬರ್ಟನ ಕರೆಕೇಳಿದ್ದರಿಂದ ಎಲ್ಸಾಳು ಉಳಿದ ಹೆಣ್ಣುಗಳನ್ನು ಬೇಲಿಯಾಚೆಗೆ ಸುರಿದು ಅರ್ನಾಲ್ಡನೊಡನೆ ಧಾವಿಸಿದಳು.

"ಮೇಲಿಂದ ಮೇಲೆ ಬರುತ್ತಿರು. ನಿನಗೆ ಸಮಯವಿಲ್ಲದೆ ಹೋದರೆ ಅರ್ನಾಲ್ಡನನ್ನು ಕಳಿಸುತ್ತಿರು ಅವನಿಗೆ ನಮ್ಮಲ್ಲಿ ಸದಾ ಸ್ವಾಗತವಿದೆ" ಎಂದ ಸೀಬರ್ಟನು ಕುದುರೆ ಏರಿನಿಂತಿದ್ದ ಹಾರ್ಟವೆಗನಿಗೆ ಹೇಳಿದ.

ಆವಾರದ ಗೋಡೆದಾಟಿ ರಾಜಮಾರ್ಗಕ್ಕೆ ಹೊರಳುವಾಗ ಅರ್ನಾಲ್ಡನು ಕೈ ಬೀಸಿ ಸೋಪಾನದ ಮೇಲೆ ನಿಂತಿದ್ದ ಪುಟ್ಟ ಸುಂದರಿಯನ್ನು ಬೀಳ್ಕೊಂಡ.

ಅಂದು ಮುಂಜಾನೆ ಅರ್ನಾಲ್ಡನಲ್ಲಿ ಮೂಡಿದ ಈ ಭಾವನೆಯು ಅವನ ಮುಂದಿನ ಆಯುಷ್ಯದಲ್ಲಿ ಪರಿಣಾಮವುಂಟು ಮಾಡದಿರದು. ಅವನ ಅಹಂಕರಕ್ಕೆ ಮೊದಲನೆಯ ಸಲ ಪ್ರತಿಬಂಧವುಂಟಾಗಿತ್ತು. ಪ್ರೊಫೆಸರನಿಗೆ ಇದು ತಿಳಿತಿದ್ದರೆ ಯಾವದೇ ಒಂದು ಗ್ರಂಥಿಯು ಕಾರ್ಯೋನ್ಮುಖವಾಗಿದೆಂದು ಹೇಳುತ್ತಿದ್ದ ಆದರೆ ಅರ್ನಾಲ್ಡನಲ್ಲಿಯ ಮನಸು ಎಚ್ಚತ್ತಿದೆಯೆಂದು ಇತರರು ಹೇಳಬಹುದಾಗಿತ್ತು.

ತಾಯಿ ಮಕ್ಕಳಿಬ್ಬರ ಆತ್ಮವನ್ನು ಒಟ್ಟಾಗಿಯೆಕೊಂಡುಬಿಟ್ಟಿದ್ದೇನೆಂದು ಪ್ರೊಫೆಸರನು ಭಾವಿಸಿದ್ದ. ಆದರೆ ವೆಂಟಳು ಕೆಲವೇ ತಿಂಗಳಾಗಲಿ ತನ್ನ ಬಸರಿನಲ್ಲಿದ್ದ ಮಗುವನ್ನು ಪ್ರೀತಿಸುತ್ತಿದಳು. ಎಂಬುದನ್ನು ಮರೆಯಬೇಕಾಗಿಲ್ಲ. ಒಂದಿಲ್ಲೊಂದು ದಿನ ಅದರ ಪ್ರಭಾವವುಕಂಡು ಬರತಕ್ಕದ್ದು.

—೩—

ಕೆಲದಿನಗಳ ನಂತರ ಅರ್ನಾಲ್ಡನು ಊಟಕ್ಕೆ ಕುಳಿತಿದ್ದಾಗ ಒಂದು ವಿಮಾನವು ಬಂದು ಮನೆಯ ಅಂಗಳದಲ್ಲಿ ಇಳಿದಂತೆ ಭಾಸವಾಯಿತು. ಹಾರ್ಟವೆಗ ಮತ್ತು ಪರ್ನರರು ಸಂಭ್ರಮದಿಂದ ಹೊರಗೆ ಹೋಗಿ ಆ ವಿಮಾನದಿಂದ ಇಳಿಯುತ್ತಿದ್ದ ಅಧಿಕಾರಿಗಳನ್ನು ವಂದಿಸಿದ್ದನ್ನು ಅರ್ನಾಲ್ಡ

ನೋಡಿದನು. ಈ ಅಪರಿಚಿತ ಆಗಂತುಕರು ಯಾರಿರಬಹುದು, ತನ್ನ ತಂದೆ ಮತ್ತು ವರ್ನರನು ಇವರಿಗೆ ಇಷ್ಟೊಂದೇಕೆ ತಲೆಬಾಗುತ್ತಿದ್ದಾರೆಂದು ಕೆರಳಿದ ಅವನ ಕುತೂಹಲ ಶಾಂತವಾಗಲು ಬಹಳ ಸಮಯದಡಿಯಲಿಲ್ಲ.

" ಇವನೇ ಆ ಮಗು ಘಾನತಿ ವೆತ್ತ ಪ್ರಭೂ " ಎಂದು ಹಾರ್ಟನೆಗನು ಆರ್ನಾಲ್ಡನ ಭುಜತಟ್ಟಿ ಹೇಳಿದನು. ಅರ್ನಾಲ್ಡನು ಒಮ್ಮೆ ಅವರನ್ನು ಕಣ್ಣು ತಪ್ಪಿಸಿ ನೋಡಿದನು ಹೋರಿಗಳನ್ನು ಕೊಳ್ಳಲು ದನದ ಸಂತೆಗೆ ಬಂದ ರೈತರಂತೆ ಆ ನಾಲ್ವರೂ ತನ್ನನ್ನೇ ಪರಿಕ್ಷಾದೃಷ್ಟಿಯಿಂದ ನೋಡುತ್ತಿದ್ದಂತೆ ಅವನಿಗೆ ಭಾಸವಾಯಿತು. ವರ್ನರ್‌ನ ಬಗ್ಗೆ ತನ್ನಲ್ಲಿ ದ್ವೇಷವುಂಟಾದದ್ದೇ ಕೆಂಬುದು ಅವನಿಗೀಗ— ಹೊಳೆಯಿತು. ವರ್ನರನು ತನ್ನನ್ನು ಮೊದಲು ಕಂಡ ದಿನ ಬೀರಿದ ನೋಟವೆ ಇಂದೂ ಅವನ ಕಣ್ಣುಗಳಲ್ಲಿತ್ತು.

" ಅದ್ಭುತ ಯಶಸ್ಸು ವರ್ನರ ಆ ಎಲ್ಲರೂ ಇವನಂತೆಯೆ ಆದರೆ ಅದು ನಿಮಗೊಂದು ಹೆಮ್ಮೆಯ ವಿಷಯ. ಬಹಳ ವರ್ಷಗಳ ಹಿಂದೆಯೆ ನಾವು ಈ ಪ್ರಯೋಗ ನಡೆಸಿದ್ದರೆ ಗೀಳಿಕ ದಲ್ಲಿ ಈ ಅತಿಮಾನವರು ನಮ್ಮ ಸಹಾಯಕ್ಕೊದಗಿ ಕ್ರಾಂತಿಯನ್ನು ತಪ್ಪಿಸಬಹುದಾಗಿತ್ತು. " ಎಂದು ಆ ಘನತೆವೆತ್ತ ಪ್ರಭು ನುಡಿದ ಅರ್ನಾಲ್ಡನನ್ನು ಅವನು ಗಮನಿಸಿದಂತೆ ತೋರಲಿಲ್ಲ.

" ನನ್ನ ವಿವಿಧ ಸಂಸ್ಥೆಗಳನ್ನು ಪ್ರಭುಗಳು ಸಂದರ್ಶಿಸಿ ತಾವೇ ಪರಾಂಬರಿಸಬೇಕು, ಪ್ರತಿ ಪ್ರಯೋಗದಲ್ಲಿ ಪೂರ್ಣತೆ ಪಡೆಯುವದಿಲ್ಲ. ಸಾಧ್ಯವಿಲ್ಲವಾದರೂ ಅಸಮಾಧಾನಕ್ಕೆ ಯಾವ ಕಾರಣವೂ ಇಲ್ಲ. " ಎಂದು ಪ್ರೊಫೆಸರನು ಪುನಃ ಆನತನಾಗಿ ಹೇಳಿದ.

" ಹುಡುಗನಿಗೆ ವಯಸ್ಸೆಷ್ಟು ? "

" ಹನ್ನೆರಡು. ಈ ವಯಸ್ಸಿನ ಉಳಿದ ಹುಡುಗರಿಗಿಂತ ಇವನು ಎತ್ತರವಾಗಿರುವವನ್ನು ಪ್ರಭುಗಳು ಕಂಡುಕೊಳ್ಳಬೇಕು. " ಎಂದು ಮೇಜರ ಹಾರ್ಟನೆಗನು ಉತ್ತರಿಸಿದ.

" ಹಾಗಿದ್ದರೆ ಇವನು ಪಾಟ್ಸಡಾಮುವಲ್ಲಿಯ ಸೈನಿಕ ಶಾಲೆಯನ್ನು ಸೇರಬಹುದೆಂದಾಯಿತು. ಇವರಿಗೆ ಆವಷ್ಟು ಬೇಗ ಸೈನ್ಯ ಶಿಕ್ಷಣ ದೊರಕಿ

ತಷ್ಟು ಒಳ್ಳೆಯದು. ಈಗಲೇ ಶಿಕ್ಷಣ ಪ್ರಾರಂಭಿಸಿದರೆ ಹದಿನಾರು ಹದಿನೇಳು ವರ್ಷದವರಾಗುವಷ್ಟರಲ್ಲಿ ಇವರು ನಮ್ಮ ಹಳಬರಿಗಿಂತ ನುರಿತವರಾಗಬಲ್ಲರು. ಈ ವಿಷಯವಾಗಿ ನಂತರ ವಿವರಿಸುವೆನು. ಈಗ ಭೋಜನಕ್ಕೆ ತೆರಳಬಹುದಲ್ಲ!" ಎಂದು ರಾಜಕುಮಾರನು ನುಡಿದನು.

ಎಲ್ಲರೂ ಮೇಜಿನೆದುರು ಮಂಡಿಸಿದರು ಅರ್ನಾಲ್ಡನು ಗಾಬರಿಯಾದಂತವನಿದ್ದ. ತಾನಿನ್ನು ಸೈನಿಕ ಶಾಲೆಗೆ ಹೋಗತಕ್ಕವನಾದ್ದರಿಂದ ಅವನಿಗೆ ಸಂತೋಷವೆನಿಸಿತು. ರಾಜಕುಮಾರನೂ ಪ್ರೊ ವರ್ನರನೂ ಆಗಾಗ ಉಲ್ಲೇಖಿಸುತ್ತಿರುವ 'ಅವರು' ಯಾರು? ತನ್ನ ಶಿಕ್ಷಣ ವ್ಯವಸ್ಥೆಯ ವಿಷಯದಲ್ಲಿ ತನ್ನ ತಂದೆ ಮೌನಿಯಾಗಿದ್ದಾನೇಕೆ? ಎಂದು ಅರ್ನಾಲ್ಡ ಚಿಂತೆಗೀಡಾಗಿದ್ದ-ಊಟ ಮುಗಿದ ಕೂಡಲೆ ತಾನು ಹೊರಗೆ ಹೊರಟು ಹೋಗಬಹುದೆಂದು ಹಾರ್ಟ್ವೆಗನು ಹೇಳಿದ್ದರಿಂದ ಅವನಿಗೆ ಸಂತೋಷವಾಯಿತು.

ಅರ್ನಾಲ್ಡನು ಹೊರಟುಹೋದಕೂಡಲೆ ಆ ನಾಲ್ವರೂ ಕುರ್ಚಿಗಳನ್ನು ಸಮೀಪಕ್ಕೆ ಎಳೆದುಕೊಂಡು ಸಂಭಾಷಣೆಯಲ್ಲಿ ತೊಡಗಿದರು.

"ಈ ಹುಡುಗನನ್ನು ನೋಡಿಕೊಂಡು ಹೋಗಲು ನಾನಿಂದು ಇಲ್ಲಿಗೆ ಬಂದಿದ್ದೇನೆ. ನಮ್ಮ ಸ್ನೇಹಿತ ಪ್ರೊ. ವರ್ನರರು ಹನ್ನೆರಡು ವರ್ಷಗಳ ಹಿಂದೆ ನಡೆಸಿದ ಪ್ರಯೋಗಗಳ ಫಲವಾಗಿ ಬಂದ ಈ ಹುಡುಗರನ್ನು ಹೇಗೆ ಉಪಯೋಗಿಸಿಕೊಳ್ಳಬೇಕು. ಎಂಬುದನ್ನೂ ನಿಮ್ಮೊಡನೆ ಆಲೋಚಿಸಲು ಬಂದಿದ್ದೇನೆ. ವರ್ನರರು ಉಳಿದ ಹುಡುಗರೆಲ್ಲ ಅರ್ನಾಲ್ಡನಷ್ಟೇ ದೃಢಕಾಯದವರಾಗಿದ್ದರೆ ಪಿತೃಭೂಮಿಗೆ ಉತ್ತಮ ಸೈನಿಕರು ದೊರೆತಂತಾಗುವದು. ಆದರೆ ಅವರೆಗೆ ಈಗಿನಿಂದಲೆ ಸೈನ್ಯಶಿಕ್ಷಣ ಕೊಡಲಾರಂಭಿಸಬೇಕು. ಈ ಶಿಕ್ಷಣ ಕೊಡುವಾಗ "ಚಕ್ರವರ್ತಿಯೇ ತಮ್ಮ ದೇವರು ದೇಶಸೇವೆಯೆ ನಮ್ಮ ಧ್ಯೇಯ, ಶತ್ರುಗಳ ಸೇಡು ತೀರಿಸಿಕೊಳ್ಳುವದೇ ನಮ್ಮ ಮಹತ್ವಾಕಾಂಕ್ಷೆ ಎಂಬುದನ್ನು ಅವರಲ್ಲಿ ಬಿಂಬಿಸಲುಮರೆಯಬಾರದು"ಎಂದು ರಾಜಕುಮಾರನು ಆವೇಶದಿಂದ ನುಡಿದನು.

"ಈಗ ಈ ಹುಡುಗರನ್ನಿಟ್ಟಿರುವ ಬೇರೆ ಬೇರೆ ಸಂಸ್ಥೆಗಳನ್ನು ನೋಡಿದರೆ ಪ್ರಭುಗಳಿಗೆ ಅತ್ಯಾನಂದವಾಗದಿರಲಾರದು. ಸಂಸ್ಕೃತಿ ಎಂಬುದನ್ನು

ನಾವು ಮರೆಸಿಬಿಟ್ಟಿದ್ದೇವೆ. ಈ ಹುಡುಗರ ದೈಹಿಕ ಶಿಕ್ಷಣವನ್ನಷ್ಟೆ ಗಮನಿಸಿ ಅವರಿಗೆ ಶಸ್ತ್ರಾಸ್ತ್ರಗಳ ಉಪಯೋಗವನ್ನು ತಿಳಿಸಿಕೊಡಲಾಗುತ್ತದೆ. ನಮ್ಮ ಶತ್ರುಗಳ ವಿಷಯವಾಗಿ ಈಗಿನಿಂದಲೇ ಇವರಲ್ಲಿ ದ್ವೇಷಭಾವನೆಯನ್ನು ಹುಟ್ಟಿಸುವದಕ್ಕಾಗಿ ಲಿ ಟ ಗ್‌ದಲ್ಲಿಯ ನಮ್ಮ ಸಂಸ್ಥೆಯ ಮುಖ್ಯಾಧ್ಯಾಪಕರು ಒಂದು ಉಪಾಯವನ್ನು ಹುಡುಕಿ ತೆಗೆದಿದ್ದಾರೆ. ಈವಿದ್ಯಾರ್ಥಿಗಳು ಯಾವದಾ ದರೊಂದು ಚಿಕ್ಕಪುಟ್ಟ ತಪ್ಪುಮಾಡಿದರೂ ಅವರು "ನಾನು ಫ್ರೆಂಚನಿದ್ದೇನೆ". ಎಂಬ ಚೀಟಿಯನ್ನು ಬೆನ್ನಿಗೆ ಅಂಟಿಸಿಕೊಂಡು ಮೂರು ದಿನ ತಿರುಗಬೇಕು. ಆ ಮೂರು ದಿನ ಉಳಿದ ಹುಡುಗರಾರೂ ಅವನೊಡನೆ ಮಾತಾಡುವದಿಲ್ಲ. ದೊಡ್ಡ ತಪ್ಪು ಮಾಡಿದರೆ 'ನಾನು ಆಂಗ್ಲನಿದ್ದೇನೆ' ಎಂಬ ಚೀಟಿಯನ್ನು ಅಂಟಿಸಿಕೊಂಡು ಮೂರು ದಿನ ತಿರುಗಬೇಕಲ್ಲದೆ ದಿನಾಲೂ ಎರಡು ತಾಸು ಕತ್ತೆಯ ಮುಖವಾಡವನ್ನು ಹಾಕಿಕೊಂಡು ಬ್ರಿಟಿಶಧ್ವಜವನ್ನು ಹಿಡಿದು ಕೊಂಡು ತನ್ನ ವರ್ಗದಲ್ಲಿ ನಿಂತಿರಬೇಕು ಎಂಬ ಶಿಕ್ಷೆ ವಿಧಿಸಲಾಗುತ್ತಿದೆ ಊಟದ ಕಾಲಕ್ಕೆ ಕೂಡ ಇವನಿಗೆ ಒಬ್ಬನಿಗೇ ಬೆರೆ ಮೇಜಿನ ಮೇಲೆ ಊಟಕ್ಕೆ ಬಡಿಸಲಾಗುತ್ತಿದೆ. ಆದ್ದರಿಂದ ಅವರು ಈ ಚಿಕ್ಕಂದಿನಲ್ಲಿಯೇ ಇಂಗ್ಲಂಡ ಫ್ರಾನ್ಸಗಳ ಬಗ್ಗೆ ವೈರ ತಳೆದಿರುವದೇನೂ ಅಚ್ಚರಿಯಲ್ಲ ಎಂದು ಪ್ರೊಫೆಸರನು ಉತ್ತರಿಸಿದ.

ಉಳಿದ ಮೂವರೂ ಸಮಾಧಾನ ವ್ಯಕ್ತಪಡಿಸಿದರು.

" ಅದ್ಭುತ 'ಅದ್ಭುತ! ಇನ್ನೂ ಹತ್ತು ವರ್ಷಗಳ ನಂತರ ನಮ್ಮ ಸೈನ್ಯವು ಜಗಜ್ಜೇತೃವಾಗುವದು. ೧೯೧೯ ರ ಕ್ರಾಂತಿಯಿಂದ ನಮ್ಮ ಸೈನ್ಯ ಬಲವು ಇನ್ನೊಂದು ಶತಮಾನದ ವರೆಗಾದರೂ ತಲೆಯೆತ್ತಲಾರದು ಎಂದು ಭಾವಿಸಿರುವ ನಮ್ಮ ಶತ್ರುಗಳ ಎಣಿಕೆ ತಪ್ಪಾಗುವದು. ೧೯೧೪ ರಲ್ಲಿ ಅವರು ಎದುರಿಸಿದ ಸೈನ್ಯಕ್ಕಿಂತ ಇಮ್ಮಡಿ ಬಲಶಾಲಿಯಾದ ಸೈನ್ಯವನ್ನು ಈ ಸಲ ಎದುರಿಸಬೇಕಾಗುವದು. ಇದುವರೆಗೆ ನಮಗೆ ಸಾಕಷ್ಟು ಅನುಭವಬಂದಿದೆ. ಇನ್ನು ನಾವೆಂದಿಗೂ ತಪ್ಪುದಾರಿ ತುಳಿಯಲಾರೆವು. ನಮ್ಮ ವೈಮಾನಿಕ ದಳ ವನ್ನು ವರುಷವರುಷಕ್ಕೆ ಹೆಚ್ಚಿಸುತ್ತಿದ್ದೇವೆ. ಸಮುದ್ರ ಮೇಲೆಯೂ ಅಂತರಿಕ್ಷ ದಲ್ಲಿಯೂ ಸಂಚರಿಸಬಲ್ಲ ಹೊಸಬಗೆಯ ವಿಮಾನಗಳ ಸಹಾಯದಿಂದ

ನಮ್ಮ ಚಿರಶತ್ರುಗಳನ್ನು ಎದುರಿಸಲು ಸಾಧ್ಯವಾಗುವದು. ಇನ್ನೂ ಕೆಲವು ಉಪಾಯುಗಳಿವೆ ಆದರೆ ಸದ್ಯಕ್ಕೆ ವರ್ಣಾಂತರ ಪ್ರಯೋಗಕ್ಕೆ ಹೆಚ್ಚು ಲಕ್ಷ ಪೂರೈಸಿ ಜರ್ಮನಿಯಲ್ಲಿ ರಾಜ್ಯಪದಲ್ಲನ್ನು ಪುನಃ ಸ್ಥಾಪಿಸುವದಕ್ಕಾಗಿ ಈ ಬಾಲಕರನ್ನು ಸರ್ವವಿಧಗಲ್ಲಿ ಉಪಯೋಗಿಸಿಕೊಳ್ಳಬೇಕು. ” ಎಂದು ರಾಜಕುಮಾರನು ಒಡನುಡಿದನು.

“ಒಂದು ಮಾತು ಹೇಳಲು ನನಗೆ ಅವಕಾಶ ಕೊಡುವಿರಾ ” ? ಎಂದು ಇದೂವರೆಗೂ ಮೌನಿಯಾಗಿದ್ದ ರಾಜಕುಮಾರನೊಡನೆ ಬಂದಿದ್ದ ಅಧಿಕಾಕಾರಿಯು ಕೇಳಿದನು. ರಾಜಕುಮಾರನು ಸಮ್ಮತಿಸಿದನು.

‘ ಸೂಕ್ಷ್ಮ ಪ್ರಶ್ನೆ ಕೇಳುತ್ತೇನೆ, ಕ್ಷಮಿಸಿಯಲಿ. ಈ ಹುಡುಗರಿಗೆ ಯಾವ ರಾಜಕೀಯ ಶಿಕ್ಷಣ ಕೊಡುತ್ತಿದೆ. ಜರ್ಮನ ಸೈನಿಕರು ನಮ್ಮ ಪಕ್ಷಕ್ಕೆ ಸೇರಿದವರಾಗಿದ್ದರೆ ಜನಸಾಮಾನ್ಯರು ಪ್ರಜಾಪಕ್ಷಕ್ಕೆ ಸೇರಿದವರಾಗಿದ್ದಾರೆ.

ಕೆಲ ನಿಮಿಷ ನಿಶ್ಶಬ್ದ ನೀರವ

“ನಿನ್ನ ಪ್ರಶ್ನೆ ಹುಚ್ಚುತನದ್ದು. ವೋಜರ ಬ್ರಿಟಿಕೊಪ್ಪ ಪಿತೃಭೂಮಿಯ ಆತ್ಮ ಸೇವೆಗೆಂದೇ ನಾವು ನಿರ್ಮಿಸಿದವಿಹೀನ ಪ್ರಾಣಿಗಳೆಂಬುದನ್ನು ನೀನು ಮರೆತಂತೆ ಕಾಣುತ್ತದೆ. ಇಂಥವರಿಗೆ ರಾಜಕೀಯ ಶಿಕ್ಷಣದ ಗೋಜು ಏಕೆ?” ಎಂದು ರಾಜಕುಮಾರನಾಡಿದ.

“ ತಾವು ಹೇಳಿದ್ದೆಲ್ಲಾ ಸರಿ. ಈ ಹುಡುಗರು ಶಿಕ್ಷಣ ಪಡೆಯುತ್ತಿರುವವರೆಗೆ ಯಾವ ತೊಂದರೆ ಇಲ್ಲ. ಆದರೆ ಅವರನ್ನು ಸೈನ್ಯದಲ್ಲಿ ಸೇರಿಸಿಕೊಂಡಕೂಡಲೆ ಅವರಿಗೆ ಹೊರಗಿನ ಜನರ ಸಂಪರ್ಕ ಬರುವದು. ಇವರಲ್ಲಿ ಕೆಲವರು ಶುದ್ಧ ಪಶುಗಳಿರಬಹುದು. ಆದರೆ ಅರ್ನಾಲ್ಡರಂಥ ಕೆಲವರು ನಾವೆಷ್ಟೋ ಅವರನ್ನು ಆತ್ಮಹೀನರೆಂದು ಭಾವಿಸಿದರೂ, ಸ್ವತಃ ವಿಚಾರ ಮಾಡಿ ನಡೆಯುವವರಿರಬಹುದು. ಕಳೆದ ಕ್ರಾಂತಿಯಿಂದ ಪ್ರತಿಯೊಬ್ಬ ಸೈನಿಕನೂ ಸ್ವತಂತ್ರ ವಿಚಾರದವನಾಗಿದ್ದಾನೆ. ನಾವೀಗ ಇದನ್ನು ಎದುರಿಸಬೇಕಾಗಿದೆ

“ ಅರ್ನಾಲ್ಡನ ಬಗ್ಗೆ ಹೇಳಬೇಕೆಂದರೆ ಅವನು ರಾಜಪಕ್ಷಕ್ಕೆ ಸೇರಿದವನು. ಆ ಸಂಸ್ಥೆನಗಳಲ್ಲಿಯ ಇತರ ಹುಡುಗರಿಗಿಂತ ಇವನು ವಿದ್ಯಾ ಬುದ್ಧಿಗಳಲ್ಲಿ ಮಿಗಿಲಾದವನಿರುವದರಿಂದ ಆ ಹುಡುಗರನ್ನು ಸಹಜವಾಗಿವ ಶರಿಸಡಿ

ಕೊಳ್ಳಬಲ್ಲನು ” ಎಂದು ಮೇ. ಹಾರ್ಟವೆಗನು ನಡುವೆ ಬಾಯಿ ಹಾಕಿ ಹೇಳಿದನು.

“ಪ್ರಭಾವಿ ಮನುಷ್ಯನಿಂದ ಬಹಳ ಕೆಲಸವಾಗುತ್ತದೆ ಈ ವರ್ಷ ಸಾಮ್ಯವಾದಿಗಳು ಪ್ರಭಲರಾಗುತ್ತಿದ್ದಾರೆ. ಆದರೇನು ಸೈನವು ನಮ್ಮ ವಶವರ್ತಿಯಾಗಿದ್ದಾರೆ ಯಾವ ಚಳವಳಿಯನ್ನು ಸದೆಬಡಿಯಬಹುದು. ಈ ಹುಡುಗರ ರಾಜಕೀಯ ಶಿಕ್ಷಣಕ್ಕಾಗಿ ವಿಶೇಷ ಲಕ್ಷ ಪೂರೈಸುವದು ಅಗತ್ಯವಿದೆ ಬ್ರೀಟ ಕೋಪ್ಸ! ಅದನ್ನು ನಿನಗೆ ವಹಿಸಿಕೊಡುತ್ತೇನೆ. ಅರ್ನಾಲ್ಡನು ಸೈನಿಕ ಶಾಲೆಯಲ್ಲಿಯ ಶಿಕ್ಷಣವನ್ನು ಮುಗಿಸಿಕೊಂಡನಂತರ ನನ್ನ ರಕ್ಷಕನಾಗಿರಲಿ ” ಎಂದು ರಾಜಕುಮಾರನು ನುಡಿದನು.

—೪—

ಮರುದಿನ ರಾಜಕುಮಾರನು ಹಾರ್ಟವೆಗನ ಮನೆಯಿಂದ ತೆರಳಿದನು. ಹಾರ್ಟವೆಗನು ಅರ್ನಾಲ್ಡನನ್ನು ಕರೆದು ಪಾಟ್ಸಡಾಮ ಸೈನಿಕ ಕಾಲೇಜಿಗೆ ಕಳಿಸುವದಾಗಿ ನಿರ್ಧರಿಸಿದ್ದನ್ನು ಅವನಿಗೆ ತಿಳಿಸಿದನು. ಪುನಃ ಹಾರ್ಟವೆಗನ ಮನೆಯುಲ್ಲಿ ಮುಂಚಿನಂತೆ ಮೌನ ಹಬ್ಬಿತು.

ಪಾಟ್ಸಡಾಮ ಕಾಲೇಜು ಪ್ರಾರಂಭವಾಗಲು ಇನ್ನೂ ಎರಡು ತಿಂಗಳು ಅವಧಿಯಿತ್ತು. ಅರ್ನಾಲ್ಡನು ಅಶ್ವಾರೋಹಣ, ಲಕ್ಷ್ಯವೇಧ ಮುಂತಾದವುಗಳಲ್ಲಿ ಹೆಚ್ಚು ಕಾಲ ಕಳೆಯುತ್ತಿದ್ದನು. ಒಮ್ಮೊಮ್ಮೆ ಶೀಟಬರ್ಗನ ಮನೆಗೆ ಹೋಗಿ ಎಲ್ಸಾಳನ್ನು ಕರೆದುಕೊಂಡು ಕಾಡಿನಲ್ಲೆಲ್ಲ ಸುತ್ತಾಡಿ ಕೆರೆತೊರೆಗಳಲ್ಲಿಯ ಬೆಳ್ಳಿ ಮೀನಗಳನ್ನು ಹಿಡಿಯುತ್ತಿದ್ದನು.

ಈ ಎಳೆಯರಿಬ್ಬರೂ ಕಾಡಿನ ಸಂಚಾರಕ್ಕೆ ಹೊರಟಕೊಡಲೇ ಎಲ್ಸಾಳ ಕುಲಂಗಿನಾಯಿ ಟೋಮಿಯೂ ಅವರನ್ನು ಹಿಂಬಾಲಿಸುತ್ತಿತ್ತು. ಟೋಮಿಯು ತನ್ನ ಪುಟ್ಟ ಒಡತಿಯನ್ನು ಪ್ರೀತಿಸುತ್ತಿದ್ದುದರೂ ಅರ್ನಾಲ್ಡನನ್ನು ಕಂಡು ಹೆದರುತ್ತಿತ್ತು. ಬಹುಶಃ ಅದು ಅವನ ಗೋಜಿಗೇ ಹೋಗುತ್ತಿಕಲಿಲ್ಲ ಅರ್ನಾಲ್ಡನು ಅದನ್ನು ಮುಟ್ಟಲು ಹೋದ ಕೂಡಲೆ ಗುತ್ತೆಂದು ಸಿಡಿದು ಧೂರಬಡತುತ್ತಿತು. ಅರ್ನಾಲ್ಡನಿಗೆ ಇದೊಂದು ಚಲ್ಲಾಟವಾಗಿತ್ತು.

ಹೀಗೆಯೆ ಒಂದು ಮಧ್ಯಾಹ್ನದಲ್ಲಿ ಇವರು ಮೀನುಹಿಡಿಯಲು ಹೋದಾಗ ಕಾಸೆರಡುತಾಸು ಆಲೆದಾಡಿದನಂತರ ಎಲ್ಸ್ಪಾಳು ಬಳಲಿದಂತಾಗಿ ತೊರೆಯ ಸಮೀಪದಲ್ಲಿಯೆ ಒಂದು ಗಿಡಪಡಿಯಲ್ಲಿ ನಿದ್ದೇ ಹೋದಳು. ಇನ್ನೂ ತನ್ನ ಆಟದಲ್ಲಿಯೇ ತೊಡಗಿದ್ದ ಅರ್ನಾಲ್ಡನು ಎರಡು ಕೋಲುಗಳಿಂದ ಒಂದೇ ಸಲಕ್ಕೆ ಎರಡು ಮೊನಗಳನ್ನು ಹಿಂದಿಯಬೇಕೆಂದು ಎಲ್ಸ್ಪಾಳ ಮೀನುಗೋಲನ್ನು ಒಯ್ಯಲು ಬಂದು ಮಲಗಿದವಳನ್ನು ಏತಕ್ಕೆ ಎಚ್ಚರಿಸಬೇಕು ಎಂದು ಸಾವಕಾಶವಾಗಿ ಅವಳ ಪಕ್ಕದಲ್ಲಿದ್ದ ಕೋಲಿಗೆ ಕೈಯಿಕ್ಕಿದ್ದ. ಮಗ್ಗಲಲ್ಲಿಯೇ ಮಲಗಿದ್ದ ಟೋಮಿಯು ಇವನ ಈ ಸಾವಧಾನದ ವ್ಯಾಪಾರವನ್ನು ಕಂಡ ತನ್ನ ಒಡತಿಯದೇನನ್ನೋ ಕದಿಯುತ್ತಿದ್ದಾನೆಂಬ ಭಾವನೆಯಿಂದಲೊ ತನ್ನ ಒಡತಿಗೆ ಅಪಾಯಮಾಡುತ್ತಿದ್ದಾನೆಂಬ ಭಾವನೆಯಿಂದಲೊ ಅದು ಒಮ್ಮೆಲೇ ಅರ್ನಾಲ್ಡನ ಮೈ ಮೇಲೆ ನೆಗೆಯಿತು ಅರ್ನಾಲ್ಡನು ಅದರ ಗುರಿಯನ್ನು ತಪ್ಪಿಸಿಕೊಂಡು ಕಾಳಗಕ್ಕೆ ಕಾಣಿಯಾದ. ಹೋರಾಡುತ್ತ ಹೋರಾಡುತ್ತ ಇಬ್ಬರೂ ತೊರೆಯ ಸಮೀಪಕ್ಕೆ ಬಂದ ಕೂಡಲೆ ಅವನು ಟೋಮಿಯನ್ನು ಎತ್ತಿ ತೊರೆಯಲ್ಲಿ ತೂರಿಬಿಟ್ಟ. ಧುಡುಂ ಎಂದು ಸದ್ದಾದ ಕೂಡಲೆ ಎಲ್ಸ್ಪಾಳಿಗೆ ಎಚ್ಚರವಾಯಿತು. ಕಣ್ತೆರೆದು ನೋಡುತ್ತಾಳೆ, ತನ್ನ ಪ್ರೀತಿಯ ಟೋಮಿ ಹಳ್ಳದಲ್ಲಿ ಸೆಳವಿಗೆ ಸಿಕ್ಕು ಕೊಚ್ಚಿಕೊಂಡು ಹೋಗುತ್ತಿದೆ.

" ಅರ್ನಾಲ್ಡ, ಟೋಮಿ ಮುಳುಗಿ ಹೋಗುತ್ತಿದೆ. ಎತ್ತಬಾರದೆ"ಎಂದು ಕಲ್ಲುಕರಗುವಂತೆ ಕಿರಚಿದಳು.

ಸೆಳವಿಗೆ ಸಿಕ್ಕ ಟೋಮಿಯು ಜೀವ ಉಳಿಸಿಕೊಳ್ಳಲು ಒದ್ದಾಡುತ್ತಿರುವದನ್ನು ನೋಡುತ್ತ ಅರ್ನಾಲ್ಡ ಸಮಾಧಾನದಿಂದ ನಗುತ್ತ ನಿಂತಿದ್ದನು.

"ನಗುತ್ತ ನಿಂತಿರುವಿಯಾ ಕತ್ತೆ ! ಟೋಮಿಯನ್ನು ಉಳಿಸಬಾರದೆ ?" ಎಂದು ಸಿಟ್ಟಿನಿಂದ ಎಲ್ಸ್ಪಾಳು ಗದ್ದರಿಸಿದಳು.

" ಇಲ್ಲಿ ನೋಡು, ನನ್ನ ಕೈ ಕಚ್ಚಿ ಬಿಟ್ಟಿದೆ. ನಾನೇ ಅದನ್ನು ಎತ್ತಿ ಹಳ್ಳಕ್ಕೆ ತೂರಿಬಿಟ್ಟಿದ್ದೇನೆ. " ಎಂದು ಅರ್ನಾಲ್ಡನು ತನ್ನ ತೋಳನ್ನು ಆಕೆಗೆ ತೋರಿಸಿದ. ಕೈಮೇಲೆ ಚಿವುರಿದ ಗಾಯಗಳಾಗಿದ್ದವಷ್ಟೆ.

" ನೀನು ಅದನ್ನು ಬೀಸಾಡಿದೆಯಾ ? ನೀನು...." ಮುಂದೆ ಅವಳ

ಬಾಯಿಂದ ಮಾತೇ ಬರಲಿಲ್ಲ. ಅವಳು ಓಡಿ ಹಳ್ಳದ ಕೆಳಗಡೆಗೆ ಹೋಗಿ ಅಲ್ಲಿ ಹಳ್ಳದ ತಿರುವಿನ ಹತ್ತಿರ ನಿಂತಳು) ಒಂದೆರಡು ನಿಮಿಷಗಳಲ್ಲಿ ಟೋಮಿಯು ಅಲ್ಲಿ ಪ್ರವಾಹದಗುಂಟ ಬರಲಿತ್ತು

''ತಡೆ ಎಲ್ಸಾ ತಡೆ'' ಎಂದು ಅರ್ನಾಲ್ಡನೂ ಅವಳ ಬೆನ್ನ ಹಿಂದಿಂದೆ ಓಡಿದ. ಒಂದು ಕ್ಷಣ ತಡಮಾಡಿದ್ದರೆ ಟೋಮಿಯಂತೆ ಎಲ್ಸಾಳಿಗೂ ಜಲಸಮಾಧಿಯಾಗುತ್ತಿತ್ತು. ಪ್ರವಾಹ ಪ್ರತಿತ ಟೋಮಿಯನ್ನು ಹಿಡಿದು ಕೊಳ್ಳಲೆಂದು ಅವಳು ನೀರಿಗಿಳಿದ ಕೂಡಲೇ ಕಾಲು ಜಾರಿ ನೀರಲ್ಲಿ ಬಿದ್ದುಬಿಟ್ಟಳು ಅರ್ನಾಲ್ಡನು ಅವಳ ರಟ್ಟೆ ಹಿಡಿದು ಮೆಲಕ್ಕೆತ್ತಿದ್ದಿಲ್ಲವಾದರೆ ಅವಳೂ ಸೆಳವಿಗೆ ಸಿಕ್ಕು ನೀರುಪಾಲಾಗುತ್ತಿದ್ದಳು.

'' ಬಿಟ್ಟು ಬಿಡು ನನ್ನನ್ನು, ನಿನ್ನ ಮೋರೆ ನೋಡಲಾರೆ. '' ಎಂದು ಎಲ್ಸಾಳು ಅವನಿಂದ ಬಿಡುಗಡೆ ಹೊಂದಲು ಕಾಡು ಬೆಕ್ಕಿನಂತೆಹವಣಿಸಿದಳು

'' ಏನು ಸಾಯಬೇಕೆಂದಿರುವಿಯಾ ?''

'' ಹೌದು. ಟೋಮಿಯಂತೆ ಸಾಯಬೇಕೆಂದಿದ್ದೇನೆ. ಟೋಮಿ ನಿನ್ನ ಕೈಯನ್ನು ಕಡಿದು ಕತ್ತರಿಸಿ ಬಿಡಬೇಕಾಗಿತ್ತು. ಈಗೇನಾಯಿತು, ಆ ಕೆಲಸ ನಾನೇ ಮಾಡುತ್ತೇನೆ '' ಎಂದು ಸಿಡಿನೋಟದ ಎಲ್ಸಾಳು ಬೇರೊಂದು ಮಾತಿಲ್ಲದೆ ಅವನ ಕೈಯ್ಯನ್ನು ಬಲವಾಗಿ ಕಚ್ಚಿಬಿಟ್ಟಳು ಅರ್ನಾಲ್ಡನು ಅರಚಿಕೊಂಡ: ಎಲ್ಸಾಳು ಅವನಿಂದ ಬಿಡಿಸಿಕೊಂಡು ಪುನಃ ಹಳ್ಳದ ಕಡೆಗೆ ಹೋದಾಗ ಕಾರ್ಯ ಮಿಂಚಿಹೋಗಿತ್ತು. ಎಲ್ಸಾಳು ನಿರಾಶೆಯಿಂದ ಹಿಂದುರುಗಿ ಗಾಯಕ್ಕೆ ಪಟ್ಟಿ ಕಟ್ಟಿಕೊಳ್ಳುತ್ತಿದ್ದ ಅರ್ನಾಲ್ಡನನ್ನು ನೋಡಿ,

'' ನೀನು ನನ್ನ ಟೋಮಿಯನ್ನು ಕೊಂದಿರುವೆ. ಸಾಯುವವರೆಗೂ ನಾನು ನಿನ್ನನ್ನು ದ್ವೇಷಿಸುವೆನು. '' ಎಂದು ಸಿಟ್ಟಿನಿಂದ ನುಡಿದವಳೇ ಬಿಕ್ಕಿ ಬಿಕ್ಕಿ ಅಳಹತ್ತಿದಳು.

ಒಂದು ಬಡಕುನ್ನಿ ಹೋದದ್ದಕ್ಕೆ ಇಷ್ಟೇಕೆ ಅವಾಂತರ ನಡೆಸಿದ್ದಾಳೆಂದು ತಿಳಿಯದೆ ಅರ್ನಾಲ್ಡನು ತನ್ನ ಗಾಯವನ್ನೇ ನೋಡುತ್ತಿದ್ದ;



ಈ ಟೋಪಿಯ ದುರ್ಘಟನೆ ಸಂಭವಿಸಿದನಂತರ ಅರ್ನಾಲ್ಡನು ಸೀಬರ್ಟನ ಮನೆಗೆ ಹೋಗಲಿಲ್ಲ. ಅವನ ಕೈಗೆ ಆದ ಗಾಯವು ಮಾಯಬೇಕಾದರೆ ಕೆಲ ದಿನಗಳು ಹಿಡಿದವು ಎಲ್ಲಾ ಹಲ್ಲುಗಳು ತೀರ ಹದನವಿದ್ದುದರಿಂದ ಅವನ ಕೈಗೆ ಉಂಟಾದ ಗಾಯದ ಕಾಲೆ ಮಾತ್ರ ಯಾವ ಜೀವ ಹೋಗುವಂತಿರಲಲ್ಲ ಅರ್ನಾಲ್ಡನು ಮನೆಗೆ ಬಂದ ಕೂಡಲೆ ಹಾರ್ಟವೆಗನಿಗೆ ಸಂಭವಿಸಿದ ಘಟನೆಯನ್ನೆಲ್ಲ ಹೇಳಿದನು. ಇದಕ್ಕಾಗಿ ಹಾರ್ಟವೆಗನು ತನ್ನನ್ನು ಪ್ರೈಯವೆ ಒಂದು ವಿಧದಲ್ಲಿ ಪ್ರೋತ್ಸಾಹಿಸಿದ್ದನ್ನು ಕಂಡು ಈ ತುಂಟನಿಗೆ ಆನಂದವೇ ಆಯಿತು.

ಬಿಡುವಿನ ದಿನಗಳು ಮುಗಿದವು. ಅರ್ನಾಲ್ಡನು ಪಾಟ್ಸಡಾಮು ಸೈನಿಕ ಕಾಲೇಜಿಗೆ ಸೇರಿದ. ಮೊದಲಿನ ಕೆಲವು ತಿಂಗಳು ಅಲ್ಲಿಯ ಶಿಸ್ತಿನಿಂದ ಅವನಿಗೆ ಬಹಳ ತೊಂದರೆಯಾಯಿತು. ಆದರೆ ಯುರೋಪದ ಯುದ್ಧದಲ್ಲಿಯೂ ಅಳಿಯದೆ ಉಳಿದ ಜರ್ಮನ ಸೈನಿಕ ವೃತ್ತಿಗೆ ಜಯವಾಗಿ ಅರ್ನಾಲ್ಡನು ಶಿಸ್ತಿಗೆ ತಲೆಬಾಗಬೇಕಾಯಿತು. ವರ್ಷ ತಿರಗುವದರೊಳಗಾಗಿ ಸೈನಿಕನ ಗುಣಗಳೆಲ್ಲ ಅವನಲ್ಲಿ ಇದಳಿವು.

ಸೈನಿಕನಾದವನು ಚಕ್ರವರ್ತಿಯೊಬ್ಬನನ್ನೇ ಒಡೆಯನೆಂದು ಭಾವಿಸಬೇಕು. ಎಂದು ಅರ್ನಾಲ್ಡನಿಗೆ ಪ್ರಾರಂಭದಿಂದಲೂ ಕಲಿಸಲಾಯಿತು ಕಾಲೇಜದಲ್ಲಿಯೂ ಅರ್ನಾಲ್ಡನು ತನ್ನ ಸ್ನೇಹಿತರಿಗೆ ಪ್ರಿಯನಾಗಲಿಲ್ಲ. ಅವನ ವಯಸ್ಸಿನ ಸ್ನೇಹಿತರು ದೊರೆಯುತ್ತಿರಲಿಲ್ಲೆಂದೇ ಹೇಳಬಹುದು

ಸಹ ವಿದ್ಯಾರ್ಥಿಗಳೆಲ್ಲ ಇವನನ್ನು ಕಂಡರೆ ಸೇರದಿದ್ದರೂ ಅನೇಕ ವಿಷಯಗಳಲ್ಲಿ ಅವನ ಮುಂದಾಳ್ತನವನ್ನು ಒಪ್ಪುತ್ತಿದ್ದರು. ಅವನೂ ತನ್ನ ಈ ಹಿರಿಮೆಯನ್ನು ಜನ್ಮಸಿದ್ಧವೆಂದು ಭಾವಿಸಿದ್ದ. ಪಿತೃಭೂಮಿ ಮತು ಕೈಸರರನ್ನು ಬಿಟ್ಟು ಬೇರೆ ಆರಾಧ್ಯದೈವತವಿಲ್ಲದ ರಾಷ್ಟ್ರಪ್ರೇಮಿ ಯುವಕರಿಂದ ಸದಾ ಸುತ್ತುಗಟ್ಟಲ್ಪಟ್ಟ ಅರ್ನಾಲ್ಡನಿಗೆ ಆ ವಿಷಯದಲ್ಲಿ ಆಸಕ್ತಿ ಹುಟ್ಟದಿರಲಿಲ್ಲ. ಎರಡನೆಯ ಯುದ್ಧದಲ್ಲಿ ಶತ್ರುಗಳನ್ನು ನಿರ್ನಾಮ ಮಾಡುವ

ದಕ್ಕಾಗಿ ನಿರ್ಮಿಸಲಾಗುತ್ತಿದ್ದ ಅದ್ಭುತ ಯಂತ್ರ ಸಾಮಗ್ರಿಗಳನ್ನು ಅವನು ಆಸಕ್ತಿಯಿಂದ ಅರಿತುಕೊಳ್ಳತೊಡಗಿದ. ಅವನ ಈ ಆಸಕ್ತಿಯಿಂದ ಕಾಲೇಜಿನಲ್ಲಿ ಉಚ್ಚದರ್ಜೆ ಪಡೆಯಲು ಬಹಳ ಅನುಕೂಲವಾಯಿತು. ಜರ್ಮನ ವಿಜ್ಞಾನವು ಕಂಡು ಹಿಡಿದಿದ್ದ ಅದ್ಭುತ ಶಸ್ತ್ರಾಸ್ತ್ರಗಳ ಪ್ರಯೋಗದಲ್ಲಿ ಪ್ರವೀಣನಾದನು. ವಿಜ್ಞಾನವು ಕಂಡು ಹಿಡಿದಿದ್ದ ಅದ್ಭುತ ಶಸ್ತ್ರಾಸ್ತ್ರಗಳ ಪ್ರಯೋಗದಲ್ಲಿ ಪ್ರವೀಣನಾದನು. ವಿಮಾನೋಡ್ಡಾಣವಂತೂ ಅವನಿಗೆ ಅತ್ಯಂತ ಪ್ರಿಯಕರವಾದ ವಿಷಯವಾಗಿತ್ತು. ಎರಡನೆ ವರ್ಷದ ಶಿಕ್ಷಣ ಮುಗಿದ ಕೂಡಲೆ ಅವನಿಗೆ ವೈಮಾನಿಕನ ಲಾಯಸೆನ್ಸ ಕೊಡಲಾಯಿತು. ಅವನು ಅತ್ಯಂತ ಸಾಹಸಿಗನಾದ ವೈಮಾನಿಕನಾದನು. ತನ್ನ ಜನರ ದ್ವೇಷಕ್ಕೆ ಇಷ್ಟೊಂದು ಕಾರಣವಾದ ಇಂಗ್ಲಂಡವನ್ನೊಮ್ಮೆ ವಿಮಾನದಲ್ಲಿ ಸುತ್ತಾಡಿ ನೋಡಿಕೊಂಡು ಬರಬೇಕೆಂಬದೊಂದು ಅವನ ಆಕಾಂಕ್ಷೆಯಾಗಿತ್ತು.

ಪ್ರತ್ಯಕ್ಷ ಯುದ್ಧವನ್ನು ನೋಡಬೇಕು, ಬಾಂಬುಗಳ ಭಯಂಕರ ಸ್ಫೋಟಗಳ ದಾರುಣ ಪರಿಣಾಮವನ್ನು ಕಣ್ಣಿನಿಂದ ಕಾಣಬೇಕು ಎಂಬ ಹಪಾಪಿಯಿಂದ ತನ್ನನ್ನು ಎಂದು ಆ ಕಾರ್ಯಕ್ಕೆ ಕಳಿಸಲಾಗುವದು ಎಂದು ಕೇಳಿಕೊಂಡಿದ್ದ. ಆದರೆ ಇನ್ನೂ ಆ ಸಮಯ ಬಂದಿಲ್ಲೆಂದು ಅವನಿಗೆ ಹೇಳಲಾಗಿತ್ತು. ಜರ್ಮನಿಯಲ್ಲಿಯೇ ಚಿಕ್ಕಪುಟ್ಟ ವಿಮಾನೋಡ್ಡಾಣವನ್ನು ನಡೆಸಿ ಅರ್ನಾಲ್ಡನು ಸಮಾಧಾನ ಹೊಂದಬೇಕಾಗಿತ್ತು.

ಒಂದುದಿನ ಇವನು ವಿಮಾನೋಡ್ಡಾಣಕ್ಕೆ ಸಿದ್ಧತೆ ನಡೆಸುತ್ತಿದ್ದಾಗ ಹಾರ್ಟವೆಗನು ಅಕಸ್ಮಾತ್ತಾಗಿ ಬಂದನು. ಲಿಪಜಿಗದಲ್ಲಿ ತನಗೆ ಕೆಲಸವಿದೆ, ಅಲ್ಲಿಗೆ ಹೋಗಬೇಕಾಗಿದೆಂದು ಹಾರ್ಟವೆಗನು ಹೇಳಿದ ಕೂಡಲೆ ಅವನನ್ನು ವಿಮಾನದಲ್ಲಿ ತಾನೇ ಕರೆದುಕೊಂಡು ಹೋಗಬೇಕೆಂದು ಹಾರ್ಟವೆಗನು ಹೇಳಿದ ಕೂಡಲೆ ಅವನನ್ನು ವಿಮಾನದತ್ತ ತಾನೇ ಕರೆದುಕೊಂಡು ಹೋಗಬೇಕೆಂದು ಅಧಿಕಾರಿಗಳ ಅಪ್ಪಣೆ ಪಡೆದುಕೊಂಡನು.

ಇವರು ಲಿಪಜಿಗವನ್ನು ಸಮೀಪಿಸಿದಾಗ ವಿಮಾನದ ಯಂತ್ರವೊಂದು ಕೆಟ್ಟಿದ್ದರಿಂದ ಅರ್ನಾಲ್ಡನು ಈಗ ಒಮ್ಮೆಲೆ ಕೆಳಗಿಳಿಯಬೇಕಾಯಿತು, ಎಂದು ಹಾರ್ಟವೆಗನಿಗೆ ಹೇಳಿ ಸಾವಧಾನದಿಂದ ವಿಮಾನವನ್ನು ಕೆಳಗಿನ ವಿಶಾಲ

ವಾದ ಹುಲ್ಲುಗಾವಲ ಮೇಲೆ ಇಳಿಸಿದನು. ಇವರು ಇಳಿದ ಸ್ಥಳದ ಅತಿ ದೂರದಲ್ಲಿ ಕಾಲೇಜಿನಂತೆ ತೋರುವ ಭವ್ಯವಾದುದೊಂದು ಕಟ್ಟಡವಿತ್ತು.

ಇವರು ಕೆಳಗಿಳಿದ ಕೂಡಲೆ ಅಲ್ಲಿದ್ದ ಹುಡುಗರು ವಿಮಾನದ ಸುತ್ತಲೂ ಮುಗಿಬಿದ್ದು ಕುತೂಹಲದಿಂದ ಇವರನ್ನು ನಿರೀಕ್ಷಿಸಹತ್ತಿದರು. ಅವರೆಲ್ಲರೂ ಅರ್ನಾಲ್ಡನ ವಯಸ್ಸಿನ ದಷ್ಟಪುಷ್ಟ ಬಾಲಕರಾಗಿದ್ದರು. ಇಂಥ ಬಾಲಕರನ್ನು ಬೇರೆಕಡೆಗೆ ಕಾಣುವದು ಅಸಾಧ್ಯವೆಂದೇ ಹೇಳಬಹುದು. ಆದರೆ ನೋಟಕರ ಈ ಪ್ರಥಮ ಕುತೂಹಲ ಶಾಂತವಾದ ಕೂಡಲೆ ಆ ಬಾಲಕರ ಮುಖದಲ್ಲಿಯ ಭಾವಶೂನ್ಯ ಪೆದ್ದತನವು ಅವರ ಕಣ್ಣಿಗೆ ಬೀಳದಿರುತ್ತಿರಲಿಲ್ಲ.

ಅರ್ನಾಲ್ಡ ಮತ್ತು ಹಾರ್ಟವೆಗರು ಆ ಕಟ್ಟಡದ ಕಡೆಗೆ ಸಾಗುತ್ತಿದ್ದಂತೆ ಈ ಬಾಲಕರ ಸಂಖ್ಯೆ ಹೆಚ್ಚುತ್ತ ನಡೆಯಿತು. ವಿಮಾನ ಕೆಳಗಿಳಿದಿದ್ದನ್ನು ಕಂಡು ಧಾವಿಸಿ ಬಂದವನೊಬ್ಬನು ಇವರನ್ನು ಗುರುತಿಸಿ

“ಓ, ಹಾರ್ಟವೆಗ, ದಾರಿತಪ್ಪಿ ಬಂದಂತಾಯಿತೆ ?” ಎಂದು ಉದ್ಗರಿಸಿದ.

ಅಕಸ್ಮಾತ್ತಾಗಿಯೆ ಇಲ್ಲಿ ಇಳಿದಂತಾಯಿತು. ಎಷ್ಟು ವರ್ಷಗಳ ನಂತರ ಹಳೆಗೆಳೆಯು ಭೆಟ್ಟಿಯಾದಂತಾಯಿತು. ಅರ್ನಾಲ್ಡ, ಗೋಲಸಾರದಲ್ಲಿ ನಮಗೆ ಭೆಟ್ಟಿಕೊಟ್ಟ ಕರ್ನಲಬ್ರೀಚ ಕೊಪ್ಪುರಿಯುವರು. ” ಎಂದು ಹಾರ್ಟವೆಗನು ಸಂತೋಷದಿಂದ ಅವನ ಹಸ್ತಾಂದೋಲನ ಮಾಡಿದನು.

ಅರ್ನಾಲ್ಡನು ಅವನಿಗೆ ಸೈನಿಕ ಪದ್ಧತಿಯ ಸಲಾಮು ಹೊಡೆದ.

“ರಾಜಕುಮಾರರೊಡನೆ ನಮ್ಮಲ್ಲಿಗೆ ಇವರು ಬಂದಿದ್ದರಲ್ಲವೆ? ನಾನು ಇವರನ್ನು ಗುರುತಿಸುತ್ತೇನೆಂ”ದು ಅರ್ನಾಲ್ಡನು ಉತ್ತರಿಸಿದ.

“ ಪಾಟ್ಸಡಾಮದಲ್ಲಿ ಉತ್ತಮ ತರುಣ ಅಧಿಕಾರಿಯು ತಯಾರಾಗುತ್ತಿದ್ದಾನೆಂದಾಯಿತು. ಉಳಿದ ಕಡೆಗಳಿಂದಲೂ ಮುಖ್ಯ ಠಣ್ಯಾಕ್ಕೆ ಅನುಕೂಲ ವರದಿಗಳು ಬಂದಿವೆ. ಈ ಜಾಣ ವೈಮಾನಿಕನು ನಿಮ್ಮನ್ನು ಇಲ್ಲಿ ಇಳಿಸುವದರಿಂದ ನೀವೀಗ ಇಲ್ಲಿ ಉಪಹಾರ ಸ್ವೀಕರಿಸಬೇಕು. ಈ ಕಾಲೇಜಿನ ತಪಾಸಣೆಗಾಗಿ ನಾನೂ ಅಕಸ್ಮಾತ್ತಾಗಿ ಇಲ್ಲಿಗೆ ಬಂದಿದ್ದೇನೆ” ಎಂದು ಬ್ರಿಟ

ಕೋಪವನ್ನು ನುಡಿದನು.

"ಇದು ವರ್ನರ ಸಂಸ್ಥೆಗಳಲ್ಲಿ ಒಂದು ಹಾಗಾದರೆ"! ಎಂದು ಹಾರ್ಟವೆಗ ವಿಚಾರಿಸಿದ.

'ಹೌದು, ಆರು ತಿಂಗಳಿಗೊಮ್ಮೆ ನಾನು ಇಲ್ಲಿ ತಪಾಸಣೆಗಾಗಿ ಬರುತ್ತೇನೆ. ಈಗಾಗಲೆ ಇಲ್ಲಿಯ ಬಾಲಕರು ಯುದ್ಧ ವಿದ್ಯೆಯಲ್ಲಿ ನಿಪುಣರಾಗಿದ್ದಾರೆ. ಬೇಕಾದರೆ ನಾಳೆಗೇ ಇವರನ್ನು ಯುದ್ಧಭೂಮಿಗೆ ಕಳಿಸಬಹುದು. ಆಗೋ. ಅಲ್ಲಿ ಅವರು ತಿವಿಗತ್ತಿಯ ಕವಾಯಿತು ನಡೆಸಿದ್ದನ್ನು ಇಲ್ಲಿಂದಲೆ ಕಾಣಬಹುದು."

ಆಂಗ್ಲ ಮತ್ತು ಫ್ರೆಂಚ ಸಮವಸ್ತ್ರದಲ್ಲಿದ್ದ ಹನ್ನೆರಡು ಗೊಂಬೆಗಳನ್ನು ಆ ಬಾಲಕರು ತಿವಿಗತ್ತಿಯಿಂದ ಚುಚ್ಚಿ ಚುಚ್ಚಿ ಆನಂದದಿಂದ ನೆಗೆದಾಡುತ್ತಿದ್ದರು.

"ಆರ್ನಾಲ್ಡ' ನಿನಗೂ ಈ ತಿವಿಗತ್ತಿಯ ಉಪಯೋಗ ಗೊತ್ತಿದೆಯೇ" ಹಾರ್ಟವೆಗ ಕೇಳಿದ.

"ನಮಗೆ ಕತ್ತಿವರಸೆ ಕಲಿಸುತ್ತಾರೆ. ಈ ತಿವಿಗತ್ತಿಯ ಉಪಯೋಗವೂ ನನಗೆ ಗೊತ್ತಿದೆ. ಆದರೆ ನಮ್ಮ ಶಿಕ್ಷಕರಾದ ಕರ್ನಲ ಆಡ್ಲರರು ವೈಮಾನಿಕ ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಡುತ್ತಾರೆ. ನಾವು ಆಗಾಗ ಮೋಜಿಗಾಗಿ ಆಕಾಶಯುದ್ಧ ನಡೆಸುತ್ತೇವೆ"ಂದು ಆರ್ನಾಲ್ಡನು ತನ್ನ ಶಿಕ್ಷಣದ ರೀತಿಯನ್ನು ತಿಳಿಸಿದ.

ಹಾರ್ಟವೆಗ ಮತ್ತೆ ಬೀಳಕೊಟ್ಟರು. ಕಾಲೇಜಿನ ಕಡೆಗೆ ಸಾಗಿದರು. ಆರ್ನಾಲ್ಡನು ಹಿಂದುಳಿದ. ಆ ಆಂಗ್ಲ-ಫ್ರೆಂಚ ಕೃತಕ ಸೈನಿಕರನ್ನು ಇರಿಯಬೇಕೆಂಬ ಹಿರಿಯಾಸೆ ಅವನಲ್ಲಿ ಮೂಡಿತು. ತನ್ನ ಶತ್ರುಗಳಾದ ಆ ಸೈನಿಕರನ್ನು ಇರಿದಿರಿದು ಅವರ ನೆತ್ತರ ಸುರಿಯುತ್ತಿರುವುದನ್ನು ಕಾಣಬೇಕೆಂಬ ಆಶೆಯಿಂದ ಅವರು ಆ ಹುಡುಗರಿದ್ದಲ್ಲಗೆ ಓಡಿದ.

"ನನಗೊಂದು ತಿವಿಗತ್ತಿ ಕೊಟ್ಟರೆ ನಾನೂ ಸ್ವಲ್ಪ ಮೋಜುನೋಡವೆನು." ಎಂದು ಆರ್ನಾಲ್ಡನು ಆ ಬಾಲಕರ ಮುಖಂಡನಂತಿದ್ದ ತನ್ನ ಓರಿಗೆಯ ಭೀಮಕಾಯದ ಬಾಲಕನನ್ನು ಕೇಳಿದ.

" ನಮ್ಮ ಶಿವಿಗತ್ತಿ ಬೇಡುವ ಈ ಚೆಲುವನನ್ನು ನೋಡಿರಿ! ಹೋಗು ಗೊಂಬೆಗಳನ್ನಿಟ್ಟುಕೊಂಡು ಆಟ ಆಡು. ಇವು ಗಂಡಸರ ಆಟಗಳು ಆನಿನ್ನ ಕೋಮಲ ಕೈಗಳಿಗೆ ಶಿವಿಗತ್ತಿಯನ್ನು ಎತ್ತಲೂ ಆಗಲಿಕ್ಕಿಲ್ಲ " ಎಂದು ಆ ಭೀಮಕಾಯದ ಹುಡುಗನು ಅರ್ನಾಲ್ಡನನ್ನು ಆವನಂತೆ ದನಿತೆಗೆದ ಅಣಕಿಸಿದ.

ನುರುಕ್ಷಣದಲ್ಲಿಯೇ ಆ ಹುಡುಗನು ಭೂಗತನಾಗಿದ್ದ. ಅರ್ನಾಲ್ಡನು ಅವನ ಎದೆಯ ಮೇಲೆ ನಿಂತಿದ್ದ. ಕಣ್ಣುಗಳು ಕೆಂಡದಂತಾಗಿದ್ದವು. ಹೀಗೆ ಅವನು ಅದಮ್ಯ ದೋಪಕ್ಕೀಡಾಗುದು ಇದೇ ಮೊದಲನೆ ಸಲ. ಬೇಟೆಯನ್ನು ಹರಿದು ತಿನ್ನಲಿರುವ ಹಿಂಸ್ರ ಪಶುವಿನಂತೆ ಅವನು ಭೀಕರನಾಗಿದ್ದ. ಇನ್ನೇನು ಇವನು ಶಿವಿಗತ್ತಿಯಿಂದ ಆ ಹುಡುಗನ ಕೊಲೆ ಮಾಡಿಬಿಡುವನೆಂದು ಹೆದರಿ ಉಳಿದ ಹುಡುಗರು ಹಿಂಜರಿದರು. ರೋಷದ ಈ ಆವೇಶ ಮುಗಿದ ಕೂಡಲೆ ಅವನು ತನ್ನ ಅಡಿಯ ಬುಡದಲ್ಲಿ ಬಿದ್ದಿದ್ದ ಹುಡುಗನನ್ನು ನೋಡಿ.

" ಏಳು, ಎಷ್ಟು ಹೊತ್ತು ಅಲ್ಲಿಯೆ ಬಿದ್ದಿರಬೇಕೆನ್ನುವಿ? "ಎಂದು ಅವನಿಗೊಂದು ಒದೆತ ಕೊಟ್ಟು ಕಾಲೇಜಿನತ್ತ ಸಾಗಿದ. ಶಿವಿಗತ್ತಿಗಳು ಸುಲಭವಾಗಿ ಅವನ ಕೈಗೆ ದೊರೆಯುವಂತೆ ಬಿದ್ದಿರಲಿಲ್ಲವಾದ್ದರಿಂದ ಆ ಹುಡುಗ ಬದುಕಿಕೊಂಡ.

ಇವನು ಬಳಲಿದವನಂತೆ ಕಾಣುತ್ತಿದ್ದದ್ದರಿಂದ ಹಾರ್ಟವೆಗನು ಕಾರಣವನ್ನು ವಿಚಾರಿಸಿದ. ಏನೂ ಇಲ್ಲ, ಸ್ವಲ್ಪ ತಲೆಶೂಲ ಮಾತ್ರ ಎಂದು ಹೇಳಿ ಅರ್ನಾಲ್ಡ ಪಾರಾದ.

ಆ ಘಟನೆ ಮಾತ್ರ ಅರ್ನಾಲ್ಡನ ಚಿತ್ತದಿಂದ ತೊಲಗಲಿಲ್ಲ. ತನ್ನನ್ನು ಪಶುವೃತ್ತಿಗಿಳಿಸುವ ಈ ಭಾವ ಮುಂದೆ ಕೂಡ ತನ್ನ ಮೇಲೆ ಅಧಿಕಾರ ನಡೆಸದಿರದು. ಎಂದೆಂದುಕೊಂಡ. ಆದರೆ ಅಪಜಿಗದಲ್ಲಿಯ ಕೆಲಸವನ್ನು ಮುಗಿಸಿಕೊಂಡು ಆವರು ಹಿಂತಿರುವಾಗ ಆವನು ಎಲ್ಲವನ್ನೂ ಅಲ್ಲಿಯೆ ಮರೆತು ಪಾಟ್ಸಡಾಮಕ್ಕೆ ಹಿಂತಿರುಗಿದ.

೨.

ಅರ್ನಾಲ್ಡನಿಗಾಗ ಹದಿನೇಳು ವರ್ಷ ಪಾಲ್ಸಡಾಮ ಕಾಲೇಜಿನ ಶಿಕ್ಷಣದ ಕೊನೆಯ ವರುಷ ನಡೆದಿತ್ತು. ಬೇಸಿಗೆಯ ಬಿಡುವಿನಲ್ಲಿ ತಂದೆಯ ಕಡೆಗೆ ಗೋಲಸಾರಕ್ಕೆ ಬಂದಿದ್ದ. ಒಂದು ಮಧ್ಯಾಹ್ನ ಅವನು ಹೆಗಲಿಗೆ ಬಂದೂಕು ಏರಿಸಿಕೊಂಡು ಕಾಡಿನಲ್ಲಿ ಸುತ್ತಾಡುತ್ತ ಸಾಗಿದಾಗ ತಾನು ಹಿಡಿದದಾರಿ ಸೀಬರ್ಟ ಮನೆಯದಾರಿ ಎಂದು ಅವನಿಗೆ ಗೊತ್ತಾಯಿತು ಟೋಮಿಯ ದುರಂತವಾದಂದಿನಿಂದ ಇವನ ಅವರ ಮನೆಗೆ ಕಾಲಿಟ್ಟಿರಲಿಲ್ಲ. ಆದರೆ ಎಲ್ಸಾಳನ್ನು ಮರೆತಿರಲಿಲ್ಲ. ಅವಳು ಅಂದು ಮೂಡಿಸಿದ ಹಲ್ಲಿನ ಗುರುತುಗಳು ಇಂದಿಗೂ ಉಳಿದಿದ್ದವು. ಅವಳನ್ನು ಶಿಕ್ಷಣಪಡೆಯುವದಕ್ಕಾಗಿ ಉಸರ್ನಕ್ಕೆ ಕಳಿಸಲಾಗಿದೆಂದು ಹಾರ್ಟವೆಗನು ಹೇಳಿದಂತೆ ಅವನಿಗೆ ನೆನಪಿತ್ತು. ಈಗ ಎಲ್ಸಾ ಮನೆಯಲ್ಲಿರಬಹುದೇ? ತನ್ನನ್ನು ಕಂಡರೆ ಮಾತಾಡಿಸಬಹುದೆ? ಎಂಬ ವಿಚಾರಗಳು ಅವನ ಮನಸ್ಸಿನಲ್ಲಿ ಸುಳಿದವು. ಕೈ ಮೇಲಿನ ಅವಳ ಹಲ್ಲಿನ ಗುರುತುಗಳನ್ನು ನೋಡಿ ನಕ್ಕು. ತೋಟದ ಬೇಲಿಯ ಆಚೆಗೆ ಹಣಿಕಿಹಾಕಿದ. ಅಷ್ಟರಲ್ಲಿ ಯಾರೊ ತನ್ನ ಹಿಂದೆ ನಿಂತಂತೆ ಭಾಸವಾಯಿತು. ತಿರುಗಿ ನೋಡಿದ, ಎಲ್ಸಾ! ಹದಿನಾರು ವರ್ಷದ ಕಾಮಿನಿಯಾಗಿದ್ದರೂ ಅವಳ ಮುಖದಲ್ಲಿ ಎಳೆಯಕಳೆ ಮಾಸಿರಲಿಲ್ಲ.

"ಎಲ್ಸಾ ನನ್ನನ್ನು ಸಂಪೂರ್ಣ ಮರೆತುಬಿಟ್ಟೆಯಾ? ಇಲ್ಲವೆ ನಾನು ನಿನ್ನ ಸ್ಮರಣೆಯಲ್ಲಿ ಉಳಿದಿರುವೆನೆ?" ಎಂದು ಅರ್ನಾಲ್ಡನು ಗೌರವದಿಂದ ಕೇಳಿದ.

ಎದುರಿಗೆ ನಿಂತಿದ್ದ ಸುಂದರ ಯುವಕನನ್ನು ಕಂಡು ಅವಳ ಮುಖ ಕೆಂಪಡರಿತು.

"ನೀನು, ನೀನು ಅರ್ನಾಲ್ಡನಲ್ಲವೆ! ಎಷ್ಟು ಸೊರಗಿರುವಿ, ನನಗೆ ಗುರುತೇ ಸಿಕ್ಕಲಿಲ್ಲ. ಬಿಡು" ಎಂದು ಸಂಭ್ರಮದಿಂದ ನುಡಿದಳು.

ಅವಳ ಈ ಮಾತುಗಳನ್ನು ಕೇಳಿ ಟೋಮಿಯ ಘಟನೆಯನ್ನು ಅವಳು ಮರೆತಿದ್ದಾಳೆಂದು ಅರ್ನಾಲ್ಡನು ಭಾವಿಸಿದ. ಆದರೆ ತನ್ನ ಎಣಿಕೆ ತಪ್ಪಾದುದೆಂದು ಅವನಿಗೆ ಕೂಡಲೆ ಕಂಡುಬಂತು.

“ಓ ನಿನ್ನ ಕೈ ಮೇಲೆ ನನ್ನ ಹಲ್ಲಿನ ಗುರುತು ಇನ್ನೂ ಉಳಿದಿದೆಯಲ್ಲ! ಸಿಟ್ಟಿನ ಭರದಲ್ಲಿ ನನಗೆ ಏನೂ ತೋಚಲಿಲ್ಲ. ಆದರೆ, ಅದರೇನು ನೀನು ಕ್ರೂರನಂತೆ ಟೋಪಿಯನ್ನು ಮುಳುಗಿಸಿಕೊಂಡೆ. ನಾನಿಂದಿಗೂ ನಿನ್ನನ್ನು ಕ್ಷಮಿಸಲಾರೆ ” ಎಂದು ಆ ವೇಗದಿಂದ ನುಡಿದಳು.

“ಎಲ್ಸಾ ಇಷ್ಟೊಂದು ಕಠೋರಳಾಗದಿರು ಎಲ್ಸಾ ಚಿಕ್ಕಂದಿನ ಮೂರ್ಖತನವನ್ನು ಮರೆತುಬಿಡು. ಆ ಬಗ್ಗೆ ನನಗೆಷ್ಟು ಪಶ್ಚಾತ್ತಾಪವಾಗಿ ದೆಂಬುದನ್ನು ನೀನರಿತರೆ ನನ್ನನ್ನು ಕ್ಷಮಿಸದಿರಲಾರೆ ” ಎಂದು ಅರ್ನಾಲ್ಡನು ದೈನ್ಯದಿಂದ ಬೇಡಿಕೊಂಡ.

“ ನಿನಗೆ ನಿಜವಾಗಿ ಪಶ್ಚಾತ್ತಾಪವಾಗಿದ್ದರೆ ನಾನು ನಿನ್ನನ್ನು ಕ್ಷಮಿಸಲೆಬೇಕು. ನಿನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯೂ ದೊರೆತಿದೆ. ಆ ಗುರುತನ್ನು ನೀನೆಂದಿಗೂ ಮರೆಯಲಾರೆ ” ಎಂದು ಎಲ್ಸಾಳು ಮುಗುಳ್ನಗೆ ಸೂಸಿ ಹೇಳಿದಳು.

“ನಿನ್ನ ನೆನಪು ತಂದುಕೊಡುವ ಅವುಗಳನ್ನೆಂದಿಗೂ ಮರೆಯಲಾರೆ. ಎಂದು ಅರ್ನಾಲ್ಡ ಗಂಭೀರನಾಗಿ ಹೇಳಿದ.

“ಪಾಟ್ಸಡಾಮದಲ್ಲಿ ನಿನಗೆ ಇಂಥ ಮಾತುಗಳನ್ನು ಕಲಿಸುತ್ತಾರೆಯೆ ? ಹಾಗಾದರೆ ನೀನು ನಾನು ಕಂಡ ಉಳಿದ ಅಧಿಕಾರಿಗಳಂತೆ ಮೂರ್ಖನಾಗಲಾರೆ. ಚಿಕ್ಕಂದಿನಲ್ಲಿ ನೀನೆಷ್ಟು ಗಂಭೀರನಾಗಿದ್ದೆ ಆದರೆ ಈಗ......” ಎಂದು ಎಲ್ಸಾಳು ಇನ್ನೂ ತನ್ನ ಮಾತು ಮುಗಿಸಿದ್ದಾಗಲೆ ಫ್ಲೈನಾರ್ಟ ಉಡುಪಿನಲ್ಲಿದ್ದ ಒಬ್ಬ ತರುಣನು ಬಂದನು.

“”ಇವನು ನನ್ನ ಭಾವಿಮೈದುನ ಹಾನ್ಸಮೆಸ್ಸಿಂಗನು. ಹಾನ್ಸ ಇವನು ನನ್ನ ಚಿಕ್ಕಂದಿನ ಗೆಳೆಯ. ಅರ್ನಾಲ್ಡ, ಹಾರ್ಟವೆಗ.” ಎಂದು ಅವಳು ಪರಸ್ಪರರ ಪರಿಚಯ ಮಾಡಿಕೊಟ್ಟಳು.

ಈ ಇಬ್ಬರೂ ಹುಡುಗರು ಸ್ವಲ್ಪ ಬಿಗುವಿನಿಂದಲೇ ಕೈಕುಲುಕಿಸಿದರು. ಹಾನ್ಸ ಮೆಸ್ಸಿಂಗನು ಅರ್ನಾಲ್ಡನನ್ನು ಅಷ್ಟೊಂದು ಆದರದಿಂದ ಕಾಣಲಿಲ್ಲ, ಸ್ತ್ರೀಸಹಜ ಲಾವಣ್ಯದಿಂದೊಪ್ಪುವ ಈ ಚೆಲುವ ಅರ್ನಾಲ್ಡನು ಎಲ್ಸಾಳ ಸ್ನೇಹಿತನಾಗಿದ್ದುದು ಅವನಿಗೆ ಸರಿಬರಲಿಲ್ಲ. ಅವನ ಬಗ್ಗೆ ಹಾನ್ಸನಲ್ಲಿ ಅಸೂಯೆ ಒಡ

ಮೂಡಿತು. ಆದರೂ ಈ ಭಾವನೆಯನ್ನು ಅವನು ಹೊರಗೆ ತೋರ್ಪಡಿಸದೆ ಅರ್ನಾಲ್ಡನೊಡನೆ ಪಾಟ್ಸಡಾಮ ಕಾಲೇಜಿನಲ್ಲಿಯ ತನ್ನ ಗೆಳೆಯರ ವಿಷಯವನ್ನು ಪ್ರಸ್ತಾಪಿಸಿ ಮಾತಾಡಹತ್ತಿದ. ಹಾನ್ಸನೂ ೧೯ ವರ್ಷದವನಾಗಿದ್ದ. ಓರಿಗೆಯವರಾದ ಅವರು ತಮ್ಮ ಆಸಕ್ತಿಯ ವಿಷಯಗಳ ಚರ್ಚೆಯಲ್ಲಿ ತೊಡಗಿದರು. ಸೈನ್ಯ ಶಿಕ್ಷಣದ ವಿಷಯಕ ಮಾತುಕತೆಗಳಲ್ಲಿ ಮಗ್ನರಾದ ಅವರು ತನ್ನನ್ನು ಗಮನಿಸದಿದ್ದುದನ್ನು ಜರ್ಮನಳೇ ಆದ ಎಲ್ಸಾಳು ಸಹಜವಾಗಿ ಸಹಿಸಿದಳು. ಅಷ್ಟರಲ್ಲಿ ಸೀಬರ್ಟನು ಬಂದು ಅರ್ನಾಲ್ಡನನ್ನು ಕಂಡು ಆದರದಿಂದ ಸ್ವಾಗತಿಸಿ ಉಪಾಹಾರಕ್ಕಾಗಿ ಈಗ ತಮ್ಮಲ್ಲಿಗೆ ಬರಬೇಕೆಂದು ಹೇಳಿದ. ಆದರೆ ಅರ್ನಾಲ್ಡನು ತಾನು ಬೇಗನೆ ಹಿಂತಿರುಗುವನೆಂದು ತಂದೆಗೆ ಹೇಳಿ ಬಂದಿರುವುದಾಗಿ ನೆವ ಹೇಳಿ ಆಮಂತ್ರಣವನ್ನು ನಿರಾಕರಿಸಿದನು, ಇವನನ್ನು ಬೀಳ್ಕೊಡಲೆಂದು ಎಲ್ಸಾಳು ಹಸ್ತಾಂದೋಲನಕ್ಕಾಗಿ ತನ್ನ ನಳಿದೋಳನ್ನು ಮುಂದೆ ಚಾಚಿದಾಗ ತಾನು ಆಮಂತ್ರಣವನ್ನು ನಿರಾಕರಿಸಿದ್ದು ತಪ್ಪಾಯಿತು ಎಂದು ಅರ್ನಾಲ್ಡನು ಮನಸ್ಸಿನಲ್ಲಿ ಪೇಚಾಡಿದ. ಮನೆಗೆ ಬರುವಾಗ ದಾರಿಯಲ್ಲೆಲ್ಲ ಆ ವಿಶಾಲಾಕ್ಷಿಯ ಚಿತ್ರವೇ ! ಅವನ ಕಣ್ಣು ಮುಂದೆ ಕಟ್ಟಿದಂತಾಗಿತ್ತು. ಅವಳನ್ನು ಆದರದಿಂದ ನೋಡುತ್ತ ನಿಂತಿದ್ದ ಹಾನ್ಸನ ಚಿತ್ರವೂ ಆಗಾಗ ಚಿತ್ತಭಿತ್ತಿಯ ಮೇಲೆ ಕಾಣಿಸಿಕೊಳ್ಳುತ್ತಿತ್ತು.

ಮರುದಿನ ತನ್ನ ಕಾಲುಗಳೇ ತನ್ನನ್ನು ಸೀಬರ್ಟನ ಮನೆಯ ಕಡೆಗೆ ಎಳೆದುಕೊಂಡು ಹೋಗುತ್ತಿರುವಂತೆ ಅರ್ನಾಲ್ಡನಿಗೆ ತೋರಿತು. ಎಲ್ಸಾಳನ್ನು ಈ ಸಲ ಕಂಡಾಗಿನಿಂದ ಅವನ ಮನಸಿನಲ್ಲಿ ಯಾವ ಭಾವನೆ ಉಯ್ಯಾಲೆಯಾಡುತ್ತಿದೆಂಬುದು ಅವನಿಗೇನೇ ತಿಳಿಯದಾಯಿತು. ಅವಳ ಸಾನಿಧ್ಯದಲ್ಲಿ ತನಗೆ ಅನಿರ್ವಚನೀಯವಾದ ಆನಂದ ದೊರೆಯುತ್ತದೆ. ತನ್ನ ನೋಟ ಅವಳ ಮುಗ್ಧಮನೋಹರ ಸೌಂದರ್ಯಕ್ಕೆ ಮಾರಿ ಹೋಯಿತಷ್ಟೆ ಅವನಿಗೆ ವೇದ್ಯವಾಗಿತ್ತು.

ಎಲ್ಸಾಳ ಬಳಿಯಲ್ಲಿ ಹಾನ್ಸನ ಸದಾ ಸಾನ್ನಿಧ್ಯವೇಕೋ ಅರ್ನಾಲ್ಡನಿಗೆ ಸರಿಬರಲಿಲ್ಲ. ಅವನು ಅಲ್ಲಿರುವನೆಂದೆ ತಾನೂ ಆ ಕಾಮಿನಿಯ ಜತೆಯಲ್ಲಿರಬೇಕೆಂದು ಅರ್ನಾಲ್ಡ ಬಯಸಿದನು. ಒಬ್ಬನಿಗಿಷ್ಟವಾದ ಸುಂದರ ವಸ್ತು

ವನ್ನು ಬೇರೊಬ್ಬನು ಸ್ವಾಭಾವಿಕವಾಗಿ ಬಯಸುವಂತೆ ಅರ್ನಾಲ್ಡನು ಎಲ್ಸಾಳನ್ನು ಬಯಸಿದ. ಆ ಮನೋಹಾರಿಣಿಯು ಇವನ ಚಿತ್ತವನ್ನಾಕರ್ಷಿಸಿದ್ದರೂ ಇವನು ಅವಳ ಪ್ರೇಮ ಜಾಲದಲ್ಲಿ ಸಿಕ್ಕು ಬಿದ್ದಿರಲಿಲ್ಲ. ಆದರೆ ಹ್ಯಾನ್ಸನು ಅವಳ ಕೌತುಕ ಮಾಡತ್ತಿರುವದನ್ನು ಪ್ರತ್ಯಕ್ಷವಾಗಿ ಕಂಡಿದ್ದ ಇವನು ಅವನಿಗೆ ಅವಳು ದೊರೆಯಬಾರದಂತೆ ಮಾಡಬೇಕು. ಎಂದು ನಿರ್ಧರಿಸಿದ.

ಹೀಗೆ ವಿಚಾರ ಮಗ್ನನಾದ ಅವನು ಎಲ್ಸಾಳ ಮನೆಯನ್ನು ತಲುಪಿದಾಗ ಅವಳು ಹಾನ್ಸನೊಂದಿಗೆ ಟೆನ್ನಿಸ ಆಡುತ್ತಿದ್ದಳು. ಇವನು ಬಂದದ್ದನ್ನು ಕಂಡು ಎಲ್ಸಾಳು ಇವನನ್ನೂ ಆಟಕ್ಕೆ ಕರೆದಳು. ಅರ್ನಾಲ್ಡನಿಗೆ ಟೆನ್ನಿಸು ಪ್ರೀತಿಯ ಆಟವಾಗಿರಲಿಲ್ಲವಾದರೂ ಚನ್ನಾಗಿ ಆಡುತ್ತಿದ್ದ. ಕೊಬ್ಬಿದವನಾದ ಹಾನ್ಸನಲ್ಲಿ ಈ ಆಟಕ್ಕೆ ಬೇಕಾಗುವ ಚಪಲತೆ ಇಲ್ಲದಿದ್ದರಿಂದ ಅವನನ್ನು ಸಹಜವಾಗಿ ಸೋಲಿಸಬಹುದೆಂದು ಆಟಕ್ಕೆ ಬರಲು ಒಪ್ಪಿದ. ಅವರೊಡನೆ ಆಡಿದ ಎರಡೇ ಆಟಗಳಲ್ಲಿ ಅವರನ್ನು ಸಹಜವಾಗಿ ಸೋಲಿಸಿದ.

ನಂತರ ಮೂವರೂ ಒಂದು ಗಿಡದಡಿಯಲ್ಲಿ ವಿಶ್ರಮಿಸಿ ಸೇವಕರ ತಂದಿದ್ದ ಕಾಫಿಸೇವನೆಯಲ್ಲಿ ತೊಡಗಿದರು. ತನ್ನನ್ನೇ ಹೆಚ್ಚಾಗಿ ಗಮನಿಸುತ್ತಿದ್ದ ಎಲ್ಸಾಳ ಚಟುವಟಿಕೆಗಳಿಂದ ಹಾನ್ಸನು ನೊಂದುಕೊಂಡದ್ದನ್ನು ಕಂಡು ಅರ್ನಾಲ್ಡನಿಗೆ ಒಳಗೊಳಗೆ ಸಂತೋಷವಾಯಿತು. ಅಂದು ಅರ್ನಾಲ್ಡನು ಮನೆಗೆ ಹೊರಟುನಿಂತಾಗ ಎಲ್ಸಾಳು ಮೋಹಕವಾದ ನಗೆ ಬೀರಿ ಮರದಿನ ಬರುವದಕ್ಕಾಗಿ ಆಮಂತ್ರಣ ವಿತ್ತಳು.

ಮರುದಿನ–ಮರುದಿನ ಹೀಗೆ ಅರ್ನಾಲ್ಡನಿಗೆ ಆ ಸುಂದರಿಯ ಮನೆಗೆ ಹೋಗುವದೊಂದು ರೂಢಿಯಾಗಿಬಿಟ್ಟಿತು. ಇವನ ಆಗಮನದಿಂದ ಎಲ್ಸಾಳು ಪುಟಬೆಂಡಿನಂತೆ ನೆಗೆದಾಡುತ್ತಿದ್ದರೆ ಹಾನ್ಸನು ಮುಖ ಮುದಡಿಸುತ್ತಿದ್ದ:

ನಂತರ ಒಂದುದಿನ ಅರ್ನಾಲ್ಡನು ಶೀಬರ್ಟನ ಮನೆಗೆ ಬಂದಾಗ ಎಲ್ಸಾಳು ಮನೆಯಲ್ಲಿಲ್ಲ. ಕೆಲನಿಮಿಷಗಳ ಹಿಂದೆ ಕಾಡಿನಲ್ಲಿ ಸುತ್ತುವದಕ್ಕಾಗಿ ತೆರೆಳಿದ್ದಾಳೆಂದು ತಿಳಿಯಿತು. ಸೇವಕನಿಂದ ಅವಳು ಹೋದದಾರಿ ತಿಳಿದುಕೊಂಡು ಅರ್ನಾಲ್ಡನು ಅವಳನ್ನು ಹುಡುಕಲು ಹೊರಟ. ಸ್ವಲ್ಪದೂರ ಹೋಗುವಷ್ಟರಲ್ಲಿ ಹಾನ್ಸನೊಡನಿದ್ದ ಎಲ್ಸಾ ಅವನ ಕಣ್ಣಿಗೆ ಬಿದ್ದಳು.

ಅವಳ ಮುಖ ಕೆಂಪೇರಿತ್ತು. ಕಣ್ಣುಗಳಲ್ಲಿ ವಿನೋದ ಕುಣಿದಾಡುತ್ತಿತ್ತು. ಹಾನ್ಸನು ಅವಳಿಗೆ ಏನನ್ನೊ ಹೇಳುತ್ತಿದ್ದಂತೆ ಕಂಡಿತು. ಅರ್ನಾಲ್ಡನು ಬಂದದ್ದನ್ನು ಕಂಡು ಅವನು ಹುಬ್ಬುಗಂಟಿಕ್ಕಿ ಮಾತು ನಿಲ್ಲಿಸಿದ.

"ಏನು, ಜಗಳಾಡುತ್ತಿದ್ದಿರಾ?" ಎಂದು ಅರ್ನಾಲ್ಡನು ಹಾನ್ಸನ ವಿಚಿತ್ರ ಸ್ವರೂಪವನ್ನು ಕಂಡು ನಗುತ್ತ ಕೇಳಿದ.

"ಊಹೂಂ! ತನ್ನ ಹೆಂಡತಿಯಾಗೆಂದು ಇವನು ಕೇಳಿದ. ನಿನ್ನ ಈ ಬೇಡಿಕೆಯನ್ನು ನಾನು ವಿಚಾರ ಮಾಡಬೇಕಾದರೆ ನೀನು ಮೊದಲು ಗಂಡಸಾಗಬೇಕು ಎಂದು ನಾನು ಹೇಳಿದ್ದರಿಂದ ಈಗ ಬಿಗಿದುಕೊಂಡು ಕೂತಿದ್ದಾನೆ" ಎಂದು ಎಲ್ಸಾಳು ಕಣ್ಣು ಕುಣಿಸುತ್ತ ಹೇಳಿದರು.

"ನಿನ್ನ ಉಪೇಕ್ಷೆಗೆ ಬೇರೆ ಯಾವ ವಸ್ತು ದೊರೆಯದಿದ್ದರೆ ನೀನು ನನ್ನನ್ನು ಉಪೇಕ್ಷಿಸಿ ಸಂತೃಪ್ತಳಾಗಬಹುದು. ನಿನ್ನ ವಿನೋದ ಬುದ್ಧಿನನಗಿರಲಿಕ್ಕಿಲ್ಲ ಹೋಗಲಿ, ನೀನು ಎಂದಾದರೂ ಒಂದುದಿನ ನನ್ನ ಸತಿಯಾಗುವಿಯೆಂಬುಹನ್ನು ಮರೆಯದಿರು. ಇದು ನಿನಗೀಗ ವಿಚಿತ್ರವಾಗಿ ತೋರಬಹುದು" ಎಂದು ಹಾನ್ಸನು ಬಿರಬಿರನೆ ನಡೆದು ಬಿಟ್ಟ.

"ಪಾಪ! ಹಾನ್ಸ ನನ್ನ ಮೇಲೆ ಸಿಟ್ಟಿಗೆದ್ದಿದ್ದಾನೆ. ಅವನ ಮಾತುಗಳನ್ನು ಕೇಳಿ ನಗು ತಡೆಯಲಿಲ್ಲ ನನಗೆ." ಎಂದು ಅವಳು ಹೊರಟು ಹೋಗುತ್ತಿದ್ದ ಹಾನ್ಸನನ್ನು ನೋಡಿ ನಗುತ್ತ ನುಡಿದಳು.

ಅರ್ನಾಲ್ಡನು ಮಾತಾಡಲಿಲ್ಲ. ಹಿಂದಕ್ಕೆರಡು ಸಲ ಅವನು ಅದಮ್ಯ ರೋಷಕ್ಕೆ ತುತ್ತಾದಂತೆ ಈಗ ಎಲ್ಸಾಳು ಹಾನ್ಸನ ಪತ್ನಿಯಾಗಲಿರುವಳೆಂಬ ಮಾತು ಕೇಳಿ ಪುನಃ ಸಿಟ್ಟಿನಿಂದ ಹುಚ್ಚನಾಗಿದ್ದ.

ಅರ್ನಾಲ್ಡನು ವಯಸ್ಸಿನಿಂದ ಚಿಕ್ಕವನಾದರೂ ಅವನ ಮನಸು ಪ್ರಗಲ್ಭವಾಗಿತ್ತು. ಸಾಮರ್ಥ್ಯದಲ್ಲಿ ಎಂಥೆಂಥವರನ್ನು ಮೀರಿಸಬಲ್ಲವನಾಗಿದ್ದ. ಶ್ವೇತಾಂಬರ ಧಾರಣೆಯಾದ ಆ ನೋಹಿನಿಯನ್ನು ನೋಡಿದ. ಗಿಡಗಳ ಎಲೆಗಳೊಳಗಿಂದ ತೂರಿಕೊಂಡು ಬಂದ ಸೂರ್ಯನ ಕಿರಣಗಳು ಅವಳ ಹೊಂಗೂದಲುಗಳ ಮೇಲೆ ಪರಾವರ್ತಿತವಾಗಿ ಅವಳ ಕೌಮಾರ ಸೌಂದರ್ಯಕ್ಕೆ ಪ್ರಭಾವಲಯವನ್ನು ಕೊಟ್ಟಿದ್ದವು. ಆದರೆ ಇವು ಯಾವವೂ ಅವನ

ದೃಷ್ಟಿಗೆ ಬೀಳಲಿಲ್ಲ. ಎಲ್ಸಾ ಹಾನ್ಸನ ತೋಳತೆಕ್ಕೆಯಲ್ಲಿದ್ದಾಳೆ ಅವಳ ಚೆಂದುಟಿಗಳು ಚುಂಬನಕ್ಕಾಗಿ ಕಾತರಗೊಂಡಿವೆ. ಹಾನ್ಸನ ಪುಷ್ಟವಾದ ಕೈಗಳು ಅವಳ ಕುರುಳುಗಳನ್ನು ನೇವರಿಸುತ್ತಿವೆ. ಎಲ್ಸಾ ತನ್ನನ್ನು ತಾನೇ ಮರೆತು ಬಿಟ್ಟಿದ್ದಾಳೆ ಎಂಬ ಚಿತ್ರವೇ ಅರ್ನಾಲ್ಡನ ಮನಸ್ಸಿನಲ್ಲಿ ಸ್ಪಷ್ಟವಾಗಿ ಒಡಮೂಡತ್ತ ಹೋಯಿತು. ಅದರೊಡನೆ ಇವನ ಪಿತ್ತವೂ ನೆತ್ತಿಗೇರಿತು. ಎಲ್ಸಾಳನ್ನು ಇವನು ಪ್ರೀತಿಸಿದ್ದರೆ ಇದಕ್ಕಿಂತ ಹೆಚ್ಚಿನ ಅಸೂಯೆಯ ಪ್ರಸಂಗವೇ ಇಲ್ಲದಿರಬಹುದಾಗಿತ್ತು. ಆದರೆ ಅವನಲ್ಲಿ ಪ್ರೀತಿಯಿರಲಿಲ್ಲ ಹೆಣ್ಣಿನ ಹತ್ತಿರ ನಿಂತಿದ್ದ ಗಂಡು ಪ್ರಾಣಿಯು ಸಮೀಪಕ್ಕೆ ಬಂದ ಇನ್ನೊಂದು ಗಂಡನ್ನು ಎದುರಿಸಿ ಓಡಿಸುವ ಭಾವವೀಗ ಅರ್ನಾಲ್ಡನನ್ನು ಪರವಶನನ್ನಾಗಿಸಿತ್ತು.

ಪರ್ನರನು ಆಗ ಅಲ್ಲಿದ್ದರೆ ತನ್ನ ಪ್ರಯೋಗದ ಯಶಸ್ಸಿಗಾಗಿ ಆನಂದ ತುಂದಿಲನಾಗುತ್ತಿದ್ದ.

ಪ್ರೇಮವನ್ನು ಎಲ್ಸಾಳಿಗೆ ತಾನೇ ಮೊದಲಿಗೆ ಕಲಿಸತಕ್ಕವನು. ನಂತರ ಹಾನ್ಸ್, ಇಲ್ಲವೆ ಯಾರು ಬೇಕಾದವರಾಗಲಿ ಆದರೆ ಮೊಟ್ಟಮೊದಲಿಗೆ....

"ಅರ್ನಾಲ್ಡ, ಏನು ನಡೆಸಿದ್ದೀ? ನಾನು ಮೂರು ಸಲ ಮಾತಾಡಿದರೂ ಸುಮ್ಮನಿದ್ದೀಯಲ್ಲ!" ಎಂದವಳು ಸೆಡವಿನಿಂದ ಅವಳನನ್ನು ಪ್ರಶ್ನಿಸಿದಳು. ಬೀಳುಪೇರಿದ ಅವನ ಮುಖವನ್ನು ಕಂಡು ಗಾಬರಿಯಾಗಿ "ಅರ್ನಾಲ್ಡ, ಮೈಯಲ್ಲಿ ನೆಟ್ಟಗಿಲ್ಲವೇ?" ಎಂದು ಮುಟ್ಟಿ ಮಾತಾಡಿಸಿದಳು.

ಅವಳ ಈ ಮೃದು ಸ್ಪರ್ಶದಿಂದ ಅವನ ಸಂಯಮವೆಲ್ಲ ಹಾಳಾಗಿ ಹೋಯಿತು. ಆ ವೇಶದಿಂದ ಅವಳನ್ನು ತನ್ನ ಬಾಹುಪಾಶದಿಂದ ಬಿಗಿಯಾಗಿ ಬಂಧಿಸಿ ಕೆನ್ನೆ, ಕೊರಳುಗಳ ಮೇಲೆ ಮುತ್ತಿನ ಸುರಿಮಳೆಗರೆದನು.

"ಅರ್ನಾಲ್ಡ! ಅರ್ನಾಲ್ಡ! ಹುಚ್ಚು ಹಿಡಿಯಿತೆ? ಎಂದು ಅವಳು ಕೊಸರಿಕೊಳ್ಳಲು ಪ್ರಯತ್ನಿಸಿದಳು. ಎಲ್ಸಾ ಅದೇ-

ಬಿಡುಗಡೆಗಾಗಿ ಅವಳ ಪ್ರಯತ್ನ. ಹೆಚ್ಚಿದಂತೆ ಅವನ ಬಾಹುಪಾಶವು ಬಿಗಿಯಾಗುತ್ತ ನಡೆಯಿತು. ಅವಳ ಚಂದುಟಿಯ ರಸಾಸ್ವಾದನೆಯಲ್ಲಿ ಅವನು ಪರವಶನಾದ. ಬರಬರುತ್ತ ಆ ಕಾಮಿನಿಯ ಪ್ರಯತ್ನ ನಿಂತುಹೋಯಿತು.

ಅವೇದ್ಯ ಸಂವೇದನೆಗೊಳಗಾದ ಅವಳು ತನ್ನ ಪ್ರಿಯಕರನಿಗೆ ಕಡವನ್ನು ಮುಟ್ಟಿಸುವ ರೀತಿಯಲ್ಲಿ ಚುಂಬನಗಳ ಸುರಿಮಳೆ ನಡೆಸಿದಳು. ಅವನ ಸುಖ ಸ್ಪರ್ಶದಿಂದ ಎಲ್ಸಾಳ ಹೃದಯವು ಉಕ್ಕೇರಿ ಪ್ರೇಮದ ನಲ್ನುಡಿಗಳು ತಂತಾವೇ ಹೊರಸೂಸತೊಡಗಿದವು. ಆರ್ನಾಲ್ಡನ ಪ್ರೇಮಾವೇಶವು ತಗ್ಗಿದೊಡನೆ ಅವರ ಸುದೀರ್ಘ ಛಾಯೆಗಳು ಮನೆಗೆ ಹಿಂದಿರುಗುವ ಸಮಯವಾಯಿತೆಂದು ಸೂಚಿಸಿದವು.

" ಆರ್ನಾಲ್ಡ ! ನೀನು ಹಾನ್ಸನಿಗಿಂತ ಚಿಕ್ಕವನು. ಆದರೂ ನಾನು ನಿನ್ನನ್ನೇ ಪ್ರೀತಿಸಿದ್ದೇನೆ. ನಾನು ನಿನ್ನವಳೇ ! ಎಂದೆಂದಿಗೂ ನಿನ್ನವಳೇ ಎಂದಿಗೂ ನಿನ್ನವಳೇ ! ಹಾನ್ಸನನ್ನು ಎಂದಿಗೂ ಒಪ್ಪಲಾರೆ." ಎಂದು ಆ ಭೋಗಿನಿಯು ತನ್ನ ನಳಿದೋಳ ತೆಕ್ಕೆಯನ್ನು ಅವನ ಕತ್ತಿನಿಂದ ಸಡಿಲಿಸದೆ ಮೃದುವಾಗಿ ನುಡಿದಳು.

ಆರ್ನಾಲ್ಡನು ಎಂದಿನಂತೆ ತಣ್ಣಗಾಗಿದ್ದ ಪ್ರೇಮಾವೇಗವು ತಗ್ಗಿದ ನಂತರ ಅವನ ನಿರ್ವಿಕಾರ ಸ್ವಭಾವ ಹಿಂತಿರುಗಿತು. ಈಗ ನಡೆದ ಘಟನೆಗಾಗಿ ಅವನಿಗೆ ಅತ್ಯಾನಂದವಾಗಿದ್ದರೂ ತಾನು ಅವಳನ್ನು ಪ್ರೀತಿಸುತ್ತಿದ್ದೇನೆಂದು ಅವಳು ಭಾವಿಸುವದು ಅವನಿಗೆ ಅಸಹ್ಯವಾಗಿತ್ತು. ನಾಳಿಗೆ ತಾನು ಪಾಟ್ಸಡಾಮಕ್ಕೆ ಹೊರಟುಹೋಗುವವನಿದ್ದದರಿಂದ ಇವಳ ತೊಂದರೆಯಾದರೂ ತಪ್ಪುವದು. ಇಲ್ಲದಿದ್ದರೆ ಧರ್ಮಸಂಕಟಕ್ಕೀಡಾಗುವ ಸಂಭವ. ಆದರೂ ಈಗಲೆ ಇವಳ ಭ್ರಮೆ ನಿರಸನ ಮಾಡಬಾರದೇಕೆ ?

" ಎಲ್ಸಾ, ನಾನು ಹುಂಬನಂತೆ ವರ್ತಿಸಿದ್ದಕ್ಕಾಗಿ ವ್ಯಸನವಾಗುತ್ತದೆ. ನಾನು ವೈಮರೆತಿದ್ದೆನೆಂದೇ ತೋರುತ್ತದೆ. ಸದ್ಯದ ಸ್ಥಿತಿಯಲ್ಲಿ ನೀನು ಹಾನ್ಸನನ್ನೇ ವರಿಸುವುದು ಒಳ್ಳೆಯದೆಂದು ತೋರುತ್ತದೆ. ಅವನೂ ನಿನ್ನನ್ನು ಗಾಢವಾಗಿ ಪ್ರೀತಿಸುತ್ತಾನೆ" ಎಂದು ಅವಳ ತೆಕ್ಕೆಯಿಂದ ಬಿಡಗಡೆ ಹೊಂದಿ ಹೇಳಿದನು.

" ಆರ್ನಾಲ್ಡ, ನೀನು ನನ್ನನ್ನು ಪ್ರೀತಿಸುವದಿಲ್ಲವೆ ? ನನಗೇನೂ ತೋಚದಾಗಿದೆ. ಇಲ್ಲದಿದ್ದರೆ ನೀನು ಹಾಗೇಕೆ—"ಎಂದವಳು ಪಿಸುದನಿಯಲ್ಲಿ ಕೇಳಿದಳು.

ಆರ್ನಾಲ್ಡನು ಇವಳನ್ನು ಲಕ್ಷಿಸದೆ ಹೇಳತೊಡಗಿದ.

“ ಸತ್ಯವನ್ನೇ ಹೇಳಬೇಕೆಂದರೆ ನಾನು ನಿನ್ನನ್ನು ಪ್ರೀತಿಸುವದಿಲ್ಲ. ನಾನು ಅದಕ್ಕೆ ಚಿಕ್ಕವನಾಗಿದ್ದೇನೆಂದು ತೋರುತ್ತದೆ. ಆದರೆ ನೀನು ಬೇರೆ ಯವರನ್ನು ಸೇರುವದಕ್ಕಿಂತ ಮೊದಲು ನನ್ನವಳಾಗಬೇಕೆಂದು ನಿರ್ಧರಿಸಿದ್ದೆ. ಅದೇಕೆ ನನಗೇ ಗೊತ್ತಿಲ್ಲ. ಬೇಕಾದರೆ ಹುಚ್ಚನಿದ್ದೇನೆಂದು ಭಾವಿಸು. ಈ ಘಟನೆಯ ಬಗ್ಗೆ ನಿನಗೆ ಖೇದವೆನಿಸುತ್ತಿದ್ದರೆ ನನ್ನದು ತಪ್ಪಾಯಿತೆಂದು ಹೇಳುತ್ತೇನೆ. ”

ಅವನ ಈ ದಾರಣ ಶಬ್ದಗಳನ್ನು ಅವಳು ಕೇಳಲಿಲ್ಲ; ಎಚ್ಚರದಪ್ಪಿ ಅವನ ಅಡಿಯಲ್ಲಿ ಬಿದ್ದಿದ್ದಳು.

ಮರುದಿನ ಆರ್ನಾಲ್ಡನು ಪಾಟ್ಸಡಾಮಕ್ಕೆ ತೆರಳಿದನು.



# ಮಾನವ

ಎಂಟು ವರ್ಷಗಳ ನಂತರ ಜರ್ಮನಿಯಲ್ಲಿ ರಾಜ್ಯಪದವು
ಪುನಃ ಸ್ಥಾಪಿತವಾಗಿದೆ. ಕೈಸರನ ನಾಲ್ಕನೇ ಮಗ
ಅಗಸ್ಟ ವಿಲ್‌ಹೆಲ್ಮನು ಈಗ ಜರ್ಮನಿಯ
ಸಾಮ್ರಾಟನಾಗಿದ್ದಾನೆ.

ನೃತ್ಯಗಾರದಲ್ಲಿ ಸೆಕೆ ಕುದಿಸುತ್ತಿದೆ. ಗಾಳಿ ಬೀಸಿದರೂ ಬಿಸಿಗಾಳಿಯೆ. ನೃತ್ಯಾಗಾರದಲ್ಲಿಯ ಲಾಂತೆಯುರ, ಬಿಸಲಿನ ತಾಪವನ್ನು ನೀಗಿಸಿಕೊಳ್ಳಲು ಬೀಸಣಿಕೆಗಳಿಂದ ಗಾಳಿ ಹಾಕಿಕೊಳ್ಳುತ್ತಿದ್ದರೆ ಅಲ್ಲಿಯ ಪುರುಷರು ತಮ್ಮ ಮೈಮೇಲಿನ ಬಟ್ಟೆಗಳ ಮಡಿಕೆ ಮಡಚಿ ಹೋಗದಂತೆ ಸೆಟೆಸು ಕೊಂಡು ನಿಂತಿದ್ದಾರೆ. ಆದ್ದರಿಂದ ಬೆಲೆಯುಳ್ಳ ಬಟ್ಟೆಗಳನ್ನು ಧರಿಸಿದ್ದರೂ ಅವರ ಮುಖಚರ್ಯೆ ವಿಚಿತ್ರವಾಗಿ ಕಾಣುತ್ತಿತ್ತು. ಸೆಕೆಕುದಿಸುವ ಆ ರಾತ್ರಿಯಲ್ಲಿ ಸುಮಧುರ ಸಂಗೀತದ ಹಿಮ್ಮೇಳವಿದ್ದರೂ ಧಾರಾಕಾರವಾಗಿ ಬೆವರಿಳಿಯುತ್ತಿದ್ದ ಅವರಲ್ಲಿ ಪ್ರಣಯ ಚೇಷ್ಟೆ ಸ್ಫುರಿಸುತ್ತಿರಲಿಲ್ಲ. ಕಿಟಕಿಯ ಹತ್ತಿರ ನಿಂತಿರುತ್ತಿದ್ದವರು ಮಾತ್ರ ಏನೋ ಸಂಭಾಷಣೆಯಲ್ಲಿ ತೊಡಗಿದಂತಿತ್ತು. ಜರ್ಮನಿಯ ರಾಜಕುಮಾರ ವಿಲಿಯಂನಿಗೆ ಮೋಜೆನ ಫೆಲ್ಟ್ ವೀನಬರ್ಗದ ರಾಜಕುಮಾರಿಯನ್ನು ಕೊಟ್ಟು ವಿವಾಹ ನಡೆಸಬೇಕೆಂಬುವರ ನಿಶ್ಚಯ ಸಮಾರಂಭಕ್ಕಾಗಿ ಈ ನೃತ್ಯವನ್ನು ಏರ್ಪಡಿಸಲಾಗಿತ್ತು. ಅಂತೆ ಇಂಥ ಸೆಕೆಯ ತಾಪವಿದ್ದರೂ ಸಂಗೀತದ ಹಿಮ್ಮೇಳಕ್ಕೆ ನೃತ್ಯ ಸಾಗಿತ್ತು.

ಅತ್ತ ರಾಜ ನೃತ್ಯಾಂಗಣದಲ್ಲಿ ನರ್ತಿಸುತ್ತಿದ್ದ ರಾಜದಂಪತಿಗಳ ನರ್ತನವು ಕೊನೆಗೊಳ್ಳಲಿತ್ತು. ಇದರಿಂದ ಬಿಡುಗಡೆ ಹೊಂದಿ ಯಾವಾಗ

ತಂಗಾಳಿಗೆ ಮೈಯೊಡ್ಡೀನೆಂದು ರಾಜಕುಮಾರ ವಿಲಿಯಂನು ಕಿಟಕಿಯನ್ನೇ ನಿರೀಕ್ಷಿಸುತ್ತಿದ್ದನು. ತನ್ನೊಡನೆ ನರ್ತಿಸುತ್ತಿದ್ದ ತನ್ನ ಜೀವನದ ಭಾವೀ ಸಂಗಾತಿಯನ್ನೊಮ್ಮೆ ನೋಡಿದನು. ಆವಳೇನೊ ಮನೋಹಾರಿಯಾಗಿರಲಿಲ್ಲ. ಸೆಕೆಯಿಂದ ಇವಳೂ ಇತರರಂತೆ ಬಸವಳಿದ್ದಳು. ಅವಳ ಸಂಪಿಗೆ ಮೂಗಿನ ಮೇಲಿಂದ ಬೆವರಹನಿಗಳು ಕೆಳಗಿಳಿಯುತ್ತಿದ್ದವು. ಆ ಸುಂದರ ರಾಜಕುಮಾರನು ಹೇಸಿಕೊಂಡು ಕಿಟಕಿಯತ್ತ ನೋಡಿದನು.

ಆ ಕಿಟಕಿಯ ಸಮೀಪದಲ್ಲಿ ನಾಲ್ವರು ನಿಂತಿದ್ದರು. ನೃತ್ಯ ಮಂದಿರದಲ್ಲಿಯ ಸೆಕೆಯ ಪರಿಣಾಮ ಅವರ ಮೇಲೆ ಆದಂತೆ ತೋರಲಿಲ್ಲ. ರಾಜಕುಮಾರನು ಅವರನ್ನು ದೃಷ್ಟಿಸಿದಾಗ ಸುಮಾರು ಇಪ್ಪತ್ತು ವರುಷದ ತರುಣಿಯು ಕಿಟಕಿಗೆ ಆತುಕೊಂಡು ನಿಂತಿದ್ದಳು. ಅವಳನ್ನು ದೃಷ್ಟಿಸಿದ ಇವನು ಆಕೆಯ ಲಾವಣ್ಯಕ್ಕೆ ಮಾರುಹೋದನು. ತನ್ನ ತೋಳ ತೆಕ್ಕೆಯಲ್ಲಿದ್ದ ವಧುವು ನುಡಿದ ಪಿಸು ಮಾತುಗಳೂ ಅವನಿಗೆ ಕೇಳಲಿಲ್ಲ. ಇನ್ನೊಮ್ಮೆ ಅವನು ಕಿಟಕಿಯತ್ತ ನೋಡಿದಾಗ ಆ ರಮಣಿಯ ಹಿಂಭಾಗವಷ್ಟೇ ಕಾಣಿಸಿತು. ಅವಳನ್ನು ನೋಡಿದಾಕ್ಷಣ ಈ ವಿಶಾಲ ಜಗತ್ತಿನಲ್ಲಿ ನಿಜವಾಗಿಯೂ ತನಗೆ ಅನುರೂಪೆಯಾದ ಚಲುವೆ ರಾಜಕುಮಾರಿಯು ಎಲ್ಲಿಯಾದರೂ ಇದ್ದಿರಬಹುದು, ಈಗ ಗಂಟು ಬಿದ್ದವಳು ರಾಜಕುಮಾರಿ ಎನಿಸಿಕೊಳ್ಳಲೂ ಅರ್ಹಳಲ್ಲವೆಂಬ ಭಾವನೆ ಅವಳಲ್ಲಿ ಸುಳಿದುಹೋಯಿತು. ತನ್ನ ನೃತ್ಯವನ್ನು ಮುಗಿಸಿದ ಕೂಡಲೆ ಆ ರಾಜಕುಮಾರನು ಕುಂಟುನೆವತೆಗೆದು ಆ ಕಿಟಕಿಯತ್ತ ಧಾವಿಸಿದನು.

"ಈ ಕಳೆದ ಒಂದು ತಾಸಿನಿಂದ ನಿಮ್ಮ ಬಗ್ಗೆ ಅಸೂಯೆ ಪಡುತ್ತಿದ್ದೆ. ಈ ನೃತ್ಯಗಾರದಲ್ಲಿ ನಿಮಗೆ ತಂಪಾದ ಸ್ಥಳ ದೊರತಿದೆ ಅಲ್ಲದೆ ನಿಮಗೆ ದೊರೆತ ಜೊತೆಗಾರ್ತಿಯರು ಸುಂದರಿಯರಾಗಿದ್ದಾರೆ." ಎಂದು ರಾಜಕುಮಾರನು ನುಡಿದು ಅಲ್ಲಿ ನಿಂತಿದ್ದ ಇಬ್ಬರು ತರುಣಿಯರನ್ನು ದೃಷ್ಟಿಸಿದನು.

"ಇವಳು ಕೌಂಟೆಸ್ ರೋಜೆನಬರ್ಗ ಮತ್ತೆ ಈಗ ನನ್ನ ಆಪ್ತ ವರ್ಗದಲ್ಲಿಯ ಕುಮಾರಿ ಎಲ್ಸಾ ಸೀಬರ್ಟ" ಎಂದು ಹಾನ್ಸ ಮೆಸ್ಸಿಂಗನು ಹೇಳಿದನು.

ವಿಯೆನ್ನಾದಲ್ಲಿ ಈಗೆರಡು ತಿಂಗಳ ಹಿಂದೆ ನಿಮ್ಮನ್ನು ಕಂಡಿರಲಿಲ್ಲವೆ ಕೌಂಟೆಸ್." ನೀವು ಮಾತ್ರ ಇದೇ ಬರ್ಲಿನಕ್ಕೆ ಬಂದಂತೆ ತೋರುತ್ತದೆ ಹೀಗಲ್ಲವೆ? ಎಂದು ರಾಜಕುಮಾರನು ಆಡಿದ.

"ತಾವು ಹೇಳುವದು ನಿಜ. ನಾನಿಲ್ಲಿಗೆ ಬಂದು ಹದಿನೈದು ದಿನಗಳಾಗಿವೆಯಷ್ಟೆ. ಆದರೆ ಚಕ್ರವರ್ತಿಗಳು ನನ್ನನ್ನು ನಿಮ್ಮ ಸೋದರಿ ಲೂಸಿಯವರ ಸಂಗಾತಿಯನ್ನಾಗಿ ನೇಮಿಸಿಕೊಂಡಿದ್ದಾರೆ" ಎಂದು ವಿನಯದಿಂದ ತಿಳಿಸಿದಳು.

ರಾಜಕುಮಾರನ ಕಣ್ಣುಗಳಲ್ಲಿ ಜೀವ ತುಂಬಿದಂತಾಯಿತು.

"ಹಾಗಾದರೆ ನಾವು ಪದೇ ಪದೇ ಭೆಟ್ಟಿಯಾಗಬಹುದು. ನನ್ನ ಸೋದರಿಗೆ ಉತ್ತಮ ಸಂಗಾತಿ ದೊರೆತಳೆನ್ನಬಹುದು. ಆದರೆ ಅರಮನೆಯಲ್ಲಿ ಯಾವ ಹುತ್ತಿನಲ್ಲಿ ಯಾವ ಹಾವಿರುವುದೋ ಹೇಳಲಿಕ್ಕೆ ಬರುವಂತಿಲ್ಲ. ಆದ್ದರಿಂದ ಜೋಕೆ" ಎಂದು ಆತ್ಮೀಯತೆಯಿಂದ ನುಡಿದನು.

"ತಾವಿರುವಾಗ, ತಮ್ಮಾಜ್ಞೆಗೇ ಪ್ರಾಧಾನ್ಯವಿರುವಾಗ ನಾನೇತಕ್ಕೆ ಹೆದರಬೇಕು ?"

"ನನ್ನಾಜ್ಞೆಯೇ ನಿನ್ನಾಜ್ಞೆ. ಆದ್ದರಿಂದ ನಾವಿಬ್ಬರೂ ಸೌಹಾರ್ದದ ಒಡಂಬಡಿಕೆ ಮಾಡಿಕೊಳ್ಳಬಹುದಲ್ಲವೆ ?"

ಎಲ್ಸಾಳು ಚಾಚಿದ ಕೋಮಲ ಕರಪಲ್ಲವವನ್ನು ರಾಜಕುಮಾರನೊಂದು ನಿಮಿಷ ಭಾವಾವೇಶದಿಂದ ಎದೆಗವಚಿಕೊಂಡು ಒಮ್ಮೆಲೆ ಎಚ್ಚತ್ತವನಂತೆ ದೂರ ಸರಿದನು.

"ಇಂದು ಸಂಜೆಯ ಕಾರ್ಯಕ್ರಮವೇನು ಮೆಸ್ಸಿಂಗ? ಬೇಕಾದರೆ ವಿಹಾರಕ್ಕಾಗಿ ತೆರಳೋಣ. ಅರ್ನಾಲ್ಡ ಹಾರ್ಟವೆಗನಿಗೆ ಬರಹೇಳಿದ್ದೆ-ಅವನಿನ್ನೂ ಬಂದಂತೆ ಕಾಣುವದಿಲ್ಲ"

"ಆಗಬಹುದು ನಂತರ ನಮ್ಮಲ್ಲಿಗೆ ಹೋಗಿ ಇಸ್ಪೇಟು ಆಟದಲ್ಲಿ ಕಾಲಸಮಯ ಕಳೆಯಬಹುದು."

"ಒಳ್ಳೇದು, ಹಾರ್ಟವೆಗನಿಗೆ ಸಮಯಕ್ಕೆ ಸರಿಯಾಗಿ ಬಂದು ಗೊತ್ತೇ ಇಲ್ಲ."

"ಅವನಿಗಿನ್ನೂ ಕೆಲಸದಿಂದ ಬಿಡುಗಡೆಯಾಗಿರಲಿಕ್ಕಿಲ್ಲ. ಅವನ ಕರ್ತೃವ್ಯದಕ್ಷತೆಯನ್ನು ನೀವರಿಯತಿಲ್ಲ."

ಅರ್ನಾಲ್ಡನ ಹೆಸರು ಕೇಳಿದಕೂಡಲೆ ಎಲ್ಸಾಳಿಗೆ ತನ್ನ ಕಾಲಕೆಳಗಿನ ಭೂಮಿಯೆ ಕುಸಿದು ಹೋದಂತಾಯಿತು. ಆದರೆ ಅದರಲ್ಲಿಯೆ ಧೈರ್ಯ ತಂದ ಕೊಂಡು ಅರ್ನಾಲ್ಡನು ಯಾರೆಂಬುದನ್ನೂ ಸಂಪೂರ್ಣವಾಗಿ ತಿಳಿದುಕೊಳ್ಳ ಬಯಸಿದಳು.

"ಲೆಫ್ಟಿನೇಟ್ ಅರ್ನಾಲ್ಡ ಹಾರ್ಟವೆಗನ ಬಗ್ಗೆ ತಾವು ಮಾತಾಡುತ್ತಿರ ವಿರಾ?" ಎಂದು ವಿಚಾರಿಸಿದಳು.

"ಅವನೀಗ ಕ್ಯಾಪ್ಟನನಾಗಿದ್ದಾನೆ. ನಿನಗವನ ಪರಿಚಯುವಿದೆಯೆ?" ಎಂದು ರಾಜಕುಮಾರನು ಕೇಳಿದ.

"ಚಿಕ್ಕಂದಿನಲ್ಲಿ ಕೂಡಿ ಆಡಿದ್ದು. ಅನಂತರ ಅವನು ಲೆಫ್ಟಿನಂಟ ನಾದದ್ದು ಮಾತ್ರ ತಿಳಿಯಿತು" ಎಂದಳು.

"ಚಕ್ರವರ್ತಿಗಳು ಪ್ರಯಾಣಿಸುತ್ತಿದ್ದಾರೆಂದು" ಆಪ್ಟೋಕ್ತಿಗೆ ಸಾರಲಾ ದ್ದರಿಂದ ರಾಜಕುಮಾರನು ಅವರನ್ನು ಬೀಳ್ಕೊಡ.ವದಕ್ಕಾಗಿ ತೆರಳಿದನು.

'ಪಾಪ, ವಿಲಿಯಂ ಅವನಿಗೆ ದೊರೆತ ವಧುವಿನ ಬಗ್ಗೆ ನಾನೇನು ಅಸೂ ಯೆಪಡುವದಿಲ್ಲ"ಎಂದು ಹಾನ್ಸ ಮೆಸ್ಸಿಂಗನು ನುಡಿದನು.

"ಆ ಸೌಭಾಗ್ಯ ದೊರೆತ ಕನ್ನೆ ಯಾರು?" ಇವರಿಬ್ಬರು ಕಿಲಕಿಲನೆ ನಗುತ್ತ ಹಿಂದಿರುಗುವಷ್ಟರಲ್ಲಿಯೆ ಎಲ್ಸಾಳು ಅರ್ನಾಲ್ಡನನ್ನು ಎದುರಿಸ ಬೇಕಾಯಿತು.

"ಇದೇನಚ್ಚರಿ ಅರ್ನಾಲ್ಡ! ಎಲ್ಲಿಯಾದರೂ ಅವಿತುಕೊಂಡಿದ್ದಿಯಾ? ರಾಜಕುಮಾರನು ನಿನ್ನನ್ನು ಕಾಣದೆ ಎಷ್ಟು ಚಡಪಡಿಸಿದನು"

"ಇದಕ್ಕೂ ಬೇಗಬರಲು ನನಗೆ ಬಿಡುಗಡೆಯೇ ಆಗಲಿಲ್ಲ. ಕೈತುಂಬ ಕೆಲಸಗಳು." ಎಂದು ಉತ್ತರಿಸಿದ.

ಹಾರಬರ್ಗದ ಕಾಡಿನಲ್ಲಿ ಅಂದು ಪ್ರಣಯೋದ್ರೇಕವನ್ನು ಪ್ರದರ್ಶಿಸಿದ ಅರ್ನಾಲ್ಡನು ಈ ಒಂದು ವರ್ಷದಲ್ಲಿ ವಿಶೇಷ ಬದಲಾವಣೆ ಹೊಂದಿದಂತೆ ಎಲ್ಸಾಳಿಗೆ ತೋರಲಿಲ್ಲ. ಕಿಶೋರಾವಸ್ಥೆ ಕಳೆದು ಮಾನವನಾಗುತ್ತಿದ್ದನಷ್ಟೆ.

ಅವನ ಮುಖದಲ್ಲಿಯುಹೆಣ್ಣು ಕಳೆ ಅಚ್ಚಳಿಯದಿತ್ತು. ಅದರಂತೆಯೇ ಅನಾಸ್ಥೆಯೆ ಭಾವವೂ ಸ್ಪಷ್ಟವಾಗಿತ್ತು. ಇವೆರಡು ಅವನ ತಾಯಿಯು ಅವನಿಗಿತ್ತ ಆಸ್ತಿ ಯೆಂದೇ ಹೇಳಬಹುದು. ಅವನು ತೊಟ್ಟಿದ್ದ ಕಪ್ಪು ಸಮವಸ್ತ್ರದಿಂದಂತೂ ಅವನ ಮುಖದ ಮೇಲಿನ ಎಳೇ ಕಳೆ ಇನ್ನಷ್ಟು ಸುವ್ಯಕ್ತವಾಗಿತ್ತು.

" ಕ್ಷೇಮವೆ ಕೌಂಟೆಸ " ಎಂದು ಅರ್ನಾಲ್ಡನು ಅವಳ ಕೈ ಕುಲುಕಿ ಸಿದ. ಆದರೆ ಅವನಿಗೆ ಎಲ್ಸಾಳ ಗುರುತೇ ಹತ್ತಿದಂತೆ ತೋರಲಿಲ್ಲ.

" ಎಲ್ಸಾ ಸೀಬರ್ಟಳ ಗುರುತು ಹತ್ತಲಿಲ್ಲವೆ ಅರ್ನಾಲ್ಡ? ನಿನ್ನ ಚಿಕ್ಕಂ ದಿನ ಗೆಳತಿಯವಳು " ಎಂದು ಹಾನ್ಸನು ನುಡಿದನು.

" ನಾವು ಒಬ್ಬರನ್ನೊಬ್ಬರು ಕಂಡು ಬಹಳ ದಿನವಾಯಿತು. ಕಾಪ್ಟನ್ ಅರ್ನಾಲ್ಡನು ನನ್ನನ್ನು ಮರೆತಿದ್ದರೆ ಅದೇನು ಅಪರಾಧವಾಗಲಾರದು " ಎಂದು ಎಲ್ಸಾ ನುಡಿದಲಿಸಿದಳು.

" ಖಂಡಿತವಾಗಿ, ನಿನ್ನನ್ನು ಮರೆಯುವದೆಂತು? ಎಂಟು ವರ್ಷಗಳ ನಂತರ ಭೆಟ್ಟಿ. ನನ್ನನ್ನು ಕ್ಷಮಿಸುವಿಯಲ್ಲವೇ ಎಲ್ಸಾ " ಎಂದು ನುಡಿದ. ಅವನು ಮಾತಾಡಿದ ರೀತಿಯನ್ನು ನೋಡಿದರೆ ಅವನಿಗೆ ತಾನು ಕಾಡಿನಲ್ಲಿ ನಡೆಸಿದ ಉಪದ್ವ್ಯಾಪದ ಅರಿವೇ ಇಲ್ಲದಾಗಿತ್ತು ಎಂಬಂತೆ ತೋರುತ್ತಿತ್ತು. ಅಷ್ಟರಲ್ಲಿಯೆ ರಾಜಪರಿವಾರವು ನೃತ್ಯಾಗಾರದಿಂದ ಹೊರ ಹೊರಡಲು ಇವರನ್ನು ಸಮೀಪಿಸಿದ್ದ ಮಾತುಕತೆ ಅಲ್ಲಿಗೇ ನಿಂತಿತು. ಅಷ್ಟರಲ್ಲಿ ಕೌಂಟೆಸ ರೋಜನಬರ್ಗಳು ಎಲ್ಸಾಳನ್ನು ಕರೆದು ಕೊಂಡು ಹೋದಳು.

" ಇನ್ನೆಲ್ಲಿಗೆ ಹ್ಯಾನ್ಸ " ಎಂದ ಅರ್ನಾಲ್ಡ.

" ಮೊದಲು ರಾಜಕುಮಾರನ ಇಚ್ಛೆಯಂತೆ ನಗರದ ಹೊರಗೆ ವಿಹ ರಿಸಿ ನಂತರ ನಮ್ಮಲ್ಲಿಗೆ... "

ಬಳಿಕ ಹಾನ್ಸ, ಅರ್ನಾಲ್ಡರು ರಾಜಕುಮಾರನನ್ನು ಹೊರಗೆ ಹೊತ್ತು ಕೊಂಡೇ ಹೋದರೆಂದು ಹೇಳಬೇಕು.



ಹ್ಯಾನೋವರದಲ್ಲಿ ' ಸಿಲ್‌ಬರ್ನ'ವು ಹೊರ ಕಣ್ಣಿಗೆ ಅಷ್ಟೊಂದು ಆಕರ್ಷಕವಾದ ಉಪಹಾರ ಗೃಹವಾಗಿರಲಿಲ್ಲ. ಆ ಕಟ್ಟಡವು ಹಳೆಯದಾ

ಗಿತ್ತು. ಒಳಗೆ ನೆಳಲು ಬೆಳಕುಗಳ ಕಣ್ಣಿಮುಚ್ಚಾಲೆ ಸದಾ ನಡೆದು ಬೆಳಕಿಗೆ ಅನೇಕ ಸಲ ಸೋಲು ಬಂದಿತ್ತೆಂದು ಸ್ಪಷ್ಟವಾಗಿ ವ್ಯಕ್ತವಾಗುವಂತೆ ಅಲ್ಲಿ ಕತ್ತಲೆಯ ರಾಜ್ಯ ಸ್ಥಾಪಿತವಾಗಿತ್ತು. ಕುರ್ಚಿ ಮೇಜುಗಳು ಸಾಲುಸಾಲಾಗಿ ಮಂಡಿಸಲ್ಪಟ್ಟಿದ್ದವು. ನಡುವಿನ ಈ ವಿಶಾಲವಾದ ಕೋಣೆಯ ಆ ತುದಿಗೆ ಒಂದು ಚಿಕ್ಕದಾದ ಕೋಣೆಯಿದ್ದು ಅದರ ಬಾಗಿಲು ಅರೆತೆರೆದಿದ್ದು ಅಲ್ಲಿ ಒಳಗೆ ಯಾರೂ ಇರಲಿಲ್ಲ.

ಹೊರಬಾಗಿಲಿನ ಸಮೀಪಕ್ಕೆ ಕುಳಿತಿದ್ದ ಇಬ್ಬರು ಒಮ್ಮೆ ಉಪಹಾರ ಗೃಹದ ಗೋಡೆಗೆ ತೂಗುಹಾಕಿದ್ದ ಗಡಿಯಾರವನ್ನು ಇನ್ನೊಮ್ಮೆ ಹೊರಗೆ ಬೀದಿಯನ್ನು ನೋಡುತ್ತಿದ್ದರಾದ್ದರಿಂದ ಯಾರದೊ ಮಾರ್ಗ ಪ್ರತೀಕ್ಷೆಯಲ್ಲಿದ್ದರೆಂದು ಸುಲಭವಾಗಿ ಹೇಳಬಹುದು. ಅವರ ಉಡುಪು ತೊಡವುಗಳಿಂದ ಅವರು ಮಧ್ಯಮ ವರ್ಗದ ಸಾಮಾನ್ಯರಂತೆ ಕಾಣುತ್ತಿದ್ದರು. ಆದರೆ ಅವರಲ್ಲಿಯ ಒಬ್ಬನ ಕೈಗಳು ತೀರ ಬಿಳುಪಾಗಿದ್ದು ಕೈ ಕೂಲಿಯಿಂದ ಹೊಟ್ಟೆ ಹೊರಕೊಳ್ಳುವ ಮಧ್ಯಮ ವರ್ಗದಲ್ಲಿ ಅಂಥ ಸುಂದರ ಹಸ್ತಗಳನ್ನು ಕಾಣುವದು ದುರ್ಲಭ. ಅವನ ದನಿಯೂ ಕರ್ಕಶವಾಗಿರಲಿಲ್ಲ.

" ಅವರಿಗೆ ಅರ್ಧಗಂಟೆ ತಡವಾಯಿತು. " ಎಂದು ಅವರಲ್ಲಿಯ ಹಿರಿಯನು ಇಪ್ಪತ್ತನೇ ಸಲ ಗಡಿಯಾರವನ್ನು ನೋಡುತ್ತ ಹೇಳಿದನು.

" ಏನಾದರೂ ತೊಂದರೆಯಾಗಿರಬೇಕು. ಇಲ್ಲವೆ ಆ ಹೆಂಗಸೇ ಕೊನೆಯ ಗಳಿಗೆಯಲ್ಲಿ ಅಂಜಿರಬಹುದು. ಆದರೆ ಹಾಗೆ ಇರಲಿಕ್ಕಿಲ್ಲ. ಅವಳಿಗೂ ಸೇಡಿನ ಪಿತ್ತ ನೆತ್ತಿಗೆ ಹತ್ತಿದೆ. ಅವಳು ಬರದಿರಲಾರಳು " ಎಂದು ಎರಡನೆಯವನು ಬಾಗಿಲ ಕಡೆಗೆ ನೋಡಿದ.

ಅಷ್ಟರಲ್ಲಿಯೇ ಇಬ್ಬರು ಒಬ್ಬ ಹೆಂಗಸನ್ನು ಕರೆದುಕೊಂಡು ಪ್ರವೇಶಿಸಿ ಅಲ್ಲಿದ್ದ ಯಾರನ್ನೂ ಲಕ್ಷಿಸದೆ ಆಚೇತುದಿಗೆ ಅರೆತೆರೆದಿದ್ದ ಬಾಗಿಲಿನಿಂದ ಪಾರಾಗಿ ಹೋದರು.

ಒಂದೆರಡು ನಿಮಿಷಗಳ ನಂತರ ಇದುವರೆಗೆ ಮಾರ್ಗಪ್ರತೀಕ್ಷೆಯಲ್ಲಿದ್ದವರೂ ಎದ್ದು ಆ ಬಾಗಿಲಿನಿಂದಲೇ ಪಾರಾಗಿ ಬಾಗಿಲನ್ನು ಭದ್ರವಾಗಿ ಇಕ್ಕಿಕೊಂಡರು.

"ಇಷ್ಟು ತಡವೇಕೆ ? ನಿಮ್ಮ ದಾರಿಕಾಯುಹತ್ತಿ ಒಂದು ತಾಸಿನ ಮೇಲಾಯಿತು" ಎಂಬು ಅವರಲ್ಲಿಯ ಹಿರಿಯನು ದರ್ಪದಿಂದ ಪ್ರಶ್ನಿಸಿದನು. ಅಲ್ಲಿದ್ದ ಇತರರು ಅವನನ್ನು ಗೌರವಿಸುತ್ತಿದ್ದರೆಂದು ಸ್ಪಷ್ಟವಾಗಿ ವ್ಯಕ್ತವಾಗುತ್ತಿತ್ತು.

"ಪ್ರಭುಗಳೆ, ಸ್ಮಿಟನಿಗೆ ಅಗತ್ಯದ ಕಾಗದ ಬಂದದ್ದರಿಂದ ಅವನು ಹೊರಟು ಹೋದ. ಆದ್ದರಿಂದ ತಡವಾಯಿತು."

"ಏನದು ಕಾಗದ ? ಅಂಥ ಮಹತ್ವದ್ದೇ ಇರಬೇಕು." ಎಂದು ಹಿರಿಯನು ಸ್ಮಿಟನನ್ನು ದುರದುರನೆ ನೋಡಿದನು

"ತಾವೇ ನೋಡಿಕೊಳ್ಳಬೇಕು ಪ್ರಭು" ಎಂದು ಸ್ಮಿಟನು ಕಾಗದವನ್ನು ಅವನ ಕೈಗೆ ಕೊಟ್ಟನು.

ಹಿರಿಯನು ಅದನ್ನು ಓದುತ್ತಿದ್ದಂತೆ ವಿಚಾರ ಗ್ರಸ್ತನಾದನು.

"ಹೂಂ ! ಆಗಷ್ಟ ವಿಲ್ಹೆಲ್ಮನು ಇನ್ನೊಂದು ಯುದ್ಧದ ಸಿದ್ಧತೆ ನಡೆಸಿದ್ದಾನೆಯೆ? ಜನರಿಗೆಈಗ ಯುದ್ಧವೆಂತು ರುಚಿಸಬಹುದು! ನಮ್ಮ ಸೈನ್ಯ ಶಾಖೆಯುವರು ವಿವಂಚನೆಗೊಳಗಾಗಿದ್ದಾರೆಂದು ಈ ಕಾಗದದಿಂದ ಕಂಡುಬರುತ್ತಿದೆ. ಯುದ್ಧ ವಿರೋಧಿಪಕ್ಷದ ಬರ್ಲಿನ ನಾಗರಿಕರ ಹೆಸರುಗಳೆಲ್ಲ ಇದರಲ್ಲಿವೆ. ಅಲ್ಲದೆ ಹ್ಯಾನೋವರ, ಲಿಪಝಿಗ, ಹ್ಯಾಂಬರ್ಗದಲ್ಲಿಯ ಯುದ್ಧವಿರೋಧಿ ಮುಖಂಡರ ನಾಮನಿರ್ದೇಶವೂ ಇದೆ. ನಮ್ಮ ಸ್ನೇಹಿತ ಕಾಫ್‌ಮನನಿಗೆ ಈಗ ಕೆಲಸ ಹೆಚ್ಚಿರಬಹುದು. ಇರಲಿ ನಿನಗೆ ಕಾಗದ ಹೇಗೆ ದೊರೆಯಿತು?"

"ಕಾಫಮನರ ಕಾರ್ಖಾನೆಯಲ್ಲಿ ದುಡಿಯುತ್ತಿರುವ ಯಹೂದಿಯೊಬ್ಬನ ಚಟುವಟಿಕೆಗಳನ್ನು ವರದಿ ಮಾಡಲು ನನ್ನನ್ನು ನೇಮಿಸಿದ್ದಾರೆ. ದಿನದಂತೆ ನಾನಿಂದು ವರದಿಯೊಪ್ಪಿಸಲು ಕಾಫಮನ್ನರಲ್ಲಿ ಹೋದಾಗ ಅಲ್ಲಿ ಬಂದಿದ್ದ ವಿಶೇಷ ದೂತನೊಬ್ಬನ ಕೈಯಲ್ಲಿ ಅವರು ಇದನ್ನು ಕೊಟ್ಟು ಕಳಿಸಿದರು. ನಾನೂ ಕೂಡಲೇ ಹೊರಬಿದ್ದು ಅವನ ಬೆನ್ನು ಹತ್ತಿ ಪ್ರಯತ್ನದಿಂದ ಅವನನ್ನು ಮಾತಾಡಿಸಿ ಸುರಾಪಾನಕ್ಕೆ ಆಮಂತ್ರಿಸಿದೆ. ಅವನು ಹೆಚ್ಚು ಕುಡಿದು ಉನ್ಮತ್ತನಾದಾಗ ನಾನಿದನ್ನು ಅಪಹರಿಸಿ ತಂದಿದ್ದೇನೆ."

ರಾಜಕುಮಾರನು ಪ್ರಶಂಸೆಯಿಂದ ತಲೆದೂಗಿದನು.

" ನಿನಗೇನು ಗೊತ್ತಿದೆ ಹೇಳು ತಾಯಿ. ನೀನು ಪಟ್ಟಿಪಾಡೇ ಜರ್ಮನಿಯಲ್ಲಿ ಇನ್ನೊಂದು ಕ್ರಾಂತಿಯನ್ನು ಹೂಡಲು ಸಾಕಷ್ಟು ಪ್ರಬಲ ಕಾರಣವಾಗಬಹುದು" ಎಂದು ರಾಜಕುಮಾರನು ಆ ಹೆಂಗಸಿಗೆ ಹೇಳಿದನು.

" ಇನ್ನೊಂದು ರಕ್ತಪಾತಕ್ಕೆ ನಾನೇನೂ ಕಾರಣವಾಗಲಿಚ್ಛಿಸುವದಿಲ್ಲ ಆದರೆ ಸೇಡು ತೀರಿಸಿಕೊಳ್ಳಲು ನನಗೆ ಅವಕಾಶ ಕೊಡುವದಾಗಿ ಇವನು ಹೇಳಿದ್ದರಿಂದ ನಾನು ಬಂದಿದ್ದೇನೆಂ"ದಳು.

" ಹಾಗೇ ಆಗಲಿ ತಾಯಿ."

" ವಚನ ಕೊಡುವಿರಾ ?"

" ಅದಕ್ಕೇನು! ಆಗಬಹುದು. " ಎಂದು ವಚನವಿತ್ತ.

೩

ಆಕೆ ಕೆಳದನಿಯಲ್ಲಿ ತನ್ನ ಕತೆಯನ್ನು ಪ್ರಾರಂಭಿಸಿದಳು.

" ಸುಮಾರು ಇಪ್ಪತ್ತು ವರ್ಷಗಳ ಹಿಂದೆ ನಾನೊಂದು ಹಳ್ಳಿಯಲ್ಲಿ ವಾಸಿಸುತ್ತಿದ್ದೆ. ನನಗೆ ಆಗ ಹದಿನೆಂಟು ವರ್ಷಗಳ ಪ್ರಾಯವಾಗಿತ್ತು. ನನ್ನ ಮದುವೆಯಾಗಿ ಮೂರೇ ವಾರಗಳಲ್ಲಿ ನನ್ನ ಗಂಡನನ್ನು ಪುನಃ ಯುದ್ಧಕ್ಕೆ ಕರೆದೊಯ್ದುದರಿಂದ ನಾನು ಪುನಃ ತವರು ಮನೆಗೆ ಹಿಂತಿರುಗಿದೆ. ನಾನು ದಷ್ಟಪುಷ್ಟ ಹೆಣ್ಣು ಮಗಳಾಗಿದ್ದರಿಂದ ಯುದ್ಧರಂಗಕ್ಕೆ ತೆರಳಿದ ನಮ್ಮ ಪುರುಷರಿಗೆ ಉಚಿತವಾದ ಕೆಲಸಗಳನ್ನು ಮಾಡುತ್ತಿದ್ದೆ. ಒಂದು ದಿನ ಕಾಡಿನಿಂದ ಸೌದೆ ಹೊರೆಯನ್ನು ಹೊತ್ತು ತರುತ್ತಿದ್ದಾಗ ಮಾರ್ಗದಲ್ಲಿ ಆಯಾಸ ಕಡಿಮೆ ಮಾಡಿಕೊಳ್ಳಲೆಂದು ಹೊರೆಯನ್ನಿಳಿಸಿ ತಂಗಿದೆ. ದೂರದಲ್ಲಿ ಯಾರೊ ಇಬ್ಬರು ಆಗಂತುಕರು ನನ್ನನ್ನೇ ನಿರುಕಿಸುತ್ತಿದಂತೆ ಕಂಡಿತು. ಮನೆಗೆ ತೆರಳಲೆಂದು ನಾನು ಪುನಃ ಎದ್ದುನಿಂತಾಗ ಆ ಆಗಂತಕರು ಕೂಗಿ ನನ್ನನ್ನು ನಿಲ್ಲಿಸಿದರು.

ನಾನು ತಿರುಗಿ ನೋಡಿದೆ. ಆವರಿಬ್ಬರೂ ರಭಸದಿಂದ ನನ್ನ ಕಡೆಗೇ ಬರುತ್ತಿದ್ದರು. ಸೌದೆ ಮಾರಲಿಕ್ಕಿದೆಯೆ ಎಂದು ಅವರಲ್ಲೊಬ್ಬ ಕೇಳಿದ. ಆಗಿನ ಪರಿಸ್ಥಿತಿ ಬಹಳ ಕಠಿಣವಾಗಿತ್ತು. ಆದ್ದರಿಂದ ನಾನು ಹೌದೆಂದು ಹೇಳಿದೆ.

ಸೌದೆ ಹಾಕಿಸಿಕೊಳ್ಳಲೆಂದು ಸಮೀಪದ ಒಂದು ಮನೆಗೆ ಕರೆದೊಯ್ದರು. ಮಳೆಗಾಲಕ್ಕಾಗಿ ಸೌದೆ ಸಂಗ್ರಹಿಸಿಡಬೇಕಾಗಿದೆ. ದಿನಾಲು ಸೌದೆ ತಂದು ಹಾಕುವಿಯಾ ಎಂದು ಕೇಳಿದರು. ಇತರರಿಗಿಂತ ಹೆಚ್ಚಿಗೆ ಹಣ ಕೊಡುವ ದಾಗಿಯೂ ಹೇಳಿದರು. ನನ್ನ ಬಾಯಲ್ಲಿ ನೀರೂರಿತು. ಆದ್ದರಿಂದ ನಾನೂ ನನ್ನ ಬಡತಾಯ್ತಂದೆಗಳು ಸುಖವಾಗಿರಬಹುದೆಂದು ಹಿಗ್ಗಿದೆ, ಮನೆಗೆ ಬಂದು ನಂತರ ತಾಯಿಗೆ ಈ ಸಂಗತಿಯನ್ನ ತಿಳಿಸಿದೆ.

ಮರುದಿನ ಮಧ್ಯಾಹ್ನ ನಾನು ಸೌದೆಹೊರೆಯನ್ನು ಹೊತ್ತುಕೊಂಡು ಹೋದೆ. ಕಾಡಿನ ಆ ಭಾಗದಲ್ಲಿ ಆ ಮನೆಯು ಒಂಟಿಯಾಗಿ ನಿಂತಿತ್ತು. ಐಷ ಆರಾಮದ ವಸ್ತುಗಳಾವವೂ ಅಲ್ಲಿ ಇದ್ದಿರಲಿಲ್ಲವಾದ್ದರಿಂದ ಆ ಮನೆಯಲ್ಲಿ ಸಾದಾಜೀವಿಗಳಿರಬಹುದೆಂದು ಭಾವಿಸಿದೆ. ಇಬ್ಬರು ಆಳುಗಳು ಕೆಲಸಕ್ಕಿದ್ದರು. ಅಡಿಗೆಯವಳು ನನಗೆ ಹಣಕೊಟ್ಟಳು. ಕಾಫಿ ಕುಡಿದು ಹೋಗಬೇಕು ಎಂದು ಆಗ್ರಹಪಡಿಸಿದಳು. ಸುಮಾರು ಒಂದು ತಾಸು ನಾನು ಅಲ್ಲಿದ್ದೆ. ಆ ಮನೆಯ ಯಜಮಾನನು ಒಬ್ಬಂಟಿಗನಾಗಿಯೇ ಇರುತ್ತಿದ್ದ. ವಿಜ್ಞಾನದ ಪ್ರಯೋಗಗಳಲ್ಲಿಯೇ ಸದಾ ಮಗ್ನನಾಗಿರುತ್ತಾನೆಂದು ಅವಳು ನನಗೆ ಹೇಳಿದಳು. ಆ ಕಾಡಿನ ಮನೆಯಲ್ಲಿ ತನಗೆ ಹೊತ್ತುಹೋಗುವದಿಲ್ಲ. ದಿನಾಲು ಮಧ್ಯಾಹ್ನ ನಾನು ಬಂದರೆ ಒಳಿತಾದೀತೆಂದೂ ಕೇಳಿಕೊಂಡಳು.

ಆ ಇಡೀ ವಾರ ದಿನಾಲೂ ನಾನು ಸೌದೆ ಹೊರೆಯನ್ನು ಆ ಮನೆಗೆ ಹೊತ್ತುಹಾಕಿದೆ. ಇನ್ನೊಂದು ಹೊರೆಯನ್ನು ಹಾಕಿದ್ದರೆ ನಮ್ಮ ಕರಾರು ಮುಗಿಯುತ್ತಿತ್ತು. ನಮ್ಮ ಗಂಡಸರೆಲ್ಲ ಯುದ್ಧಕ್ಕೆ ಹೋಗಿದ್ದರಿಂದ ಬಾಳು ಬೇಸರವಾಗಿತ್ತು. ಅಲ್ಲಿಯ ಆಳುಗಳೊಡನೆ ಒಂದೆರಡು ತಾಸು ಹರಟೆ ಕೊಚ್ಚಿದರೆ ಅಷ್ಟೇ ಸಮಾಧಾನವೆನಿಸುತ್ತಿತ್ತು. ಕೊನೆಯ ಹೊರೆಯನ್ನು ಹಾಕಲು ಹೋದ ದಿನ ಅಡಿಗೆಯವಳು ಇನ್ನಷ್ಟು ಆದರತೋರಿಸಿ ಇನ್ನೊಂದು ಕಪ್ಪು ಕಾಫಿ ಕೊಟ್ಟಳು. ಆದನ್ನು ಕುಡಿದೆ. ಬೇಸಿಗೆಯ ಸೆಕೆಯಿಂದ ಕುದಿಯುತ್ತಿದ್ದ ಆ ಅಡುಗೆ ಮನೆಯ ಹವೆ ಇನ್ನಷ್ಟು ಬಿಸಿಯಾದಂತೆ ತೋರಿತು. ಅಡಿಗೆಯವಳ ದನಿ ದೂರ ದೂರದಿಂದ ಕೇಳುತ್ತಿರುವಂತೆ ಭಾಸವಾಯಿತು. ದೇಹದ ತೂಕ ತಪ್ಪಿತು. ಪುನಃ ನಾನು ಮೂರ್ಛೆ ತಿಳಿದೆದ್ದಾಗ ದೊಡ್ಡ

ಕೋಣೆಯೊಂದರಲ್ಲಿ ಮಂಚದ ಮೇಲೆ ಮಲಗಿದ್ದೆ. ಅಂದು ಕಾಡಿನಲ್ಲಿ ಕಂಡ ಮನುಷ್ಯನು ಸಮೀಪದಲ್ಲಿದ್ದ. ಅವನನ್ನು ಕಂಡು ಹೆದರಿ ಎದ್ದೇಳಲು ಪ್ರಯತ್ನಿಸಿದೆ. ಆದರೆ ಅವನು ತಡೆದು ಅಡುಗೆ ಮನೆಯ ಸೆಕೆಯಿಂದ ನನಗೆ ತ್ರಾಸವಾದ್ದರಿಂದ ಇಲ್ಲಿಗೆ ಕರೆದುಕೊಂಡು ಬರಲಾಗಿತೆಂದು ಹೇಳಿ ಕುಡಿಯಲು ನೀರು ಕೊಟ್ಟ. ಕೆಲ ನಿಮಿಷಗಳ ನಂತರ ಅಲ್ಲಿಂದ ಏಳಲು ತ್ರಾಣಬಂತು. ಆದರೆ ಏಕೋ ಏನೋ ನಾನು ಹೆದರಿಹೋಗಿದ್ದೆ. ಆದಷ್ಟು ಬೇಗನೆ ಅಲ್ಲಿಂದ ಓಡಿಹೋಗಬೇಕು ಎಂದು ನನಗೆನಿಸಹತ್ತಿತು.

ಮನೆಗೆ ಹಿಂತಿರುಗಿದರೂ ಆ ಭೀತಿ ನನ್ನನ್ನು ಬಿಡಲಿಲ್ಲ. ಅಂದಿನ ರಾತ್ರಿ ವಿಚಾರಗಳ ತಾಕಲಾಟದಲ್ಲಿ ನನಗೆ ಜಾಗರಣೆ ಆಯಿತು

ದಿನಗಳುರುಳಿದವು. ಆ ಭೀತಿ ಇಲ್ಲದಾಗುತ್ತಿತ್ತು. ಒಂದು ದಿನ ತಾಯಿಗೆ ಕೆಲಸದಲ್ಲಿ ನೆರವಾಗುತ್ತಿದ್ದಂತೆ ನನ್ನ ಕಣ್ಣಿಗೆ ಕತ್ತಲುಗವಿದಂತಾಯಿತು. ನನ್ನ ತಾಯಿಯು ನನ್ನನ್ನು ಹಾಸಿಗೆಯ ಮೇಲೆ ಮಲಗಿಸಿ ಸಮೀಪದ ಮುದುಕಿ ಸೂಲಗಿತ್ತಿಯೊಬ್ಬಳನ್ನು ತಂದು ತೋರಿಸಿದಳು. ಅವಳು ನನ್ನನ್ನು ಪರೀಕ್ಷಿಸಿ ಕೆಲವು ಪ್ರಶ್ನೆಗಳನ್ನು ಕೇಳಿದಳು. ನಂತರ ನಾವಿಬ್ಬರೆ ಇದ್ದಾಗ " ಹುಡುಗಿ, ನಿನ್ನ ಕಾದಲನಾರು ? ಅವನಿಗೂ ಇದು ತಿಳಿಯಬೇಕಾದುದು " ಎಂದು ಪಿಸುಮಾತಿನಲ್ಲಿ ಕೇಳಿದಳು.

" ಏನನ್ನು ತಿಳಿಯಬೇಕು ? ನನ್ನ ಪ್ರಿಯಕರ, ನನಗಾರೂ ಪ್ರಿಯಕರನೇ ಇಲ್ಲವಲ್ಲ ! ತಪ್ಪು ತಿಳಿದುಕೊಳ್ಳದಿರು " ಎಂದು ನಾನು ಗಾಬರಿಯಿಂದ ಉತ್ತರಿಸಿದೆ.

" ಸುಳ್ಳು ಹೇಳಬೇಡ. ತಂಗೀ, ನೀನು ಇನ್ನು ತಾಯಿಯಾಗಲಿರುವೆ. ನಿನ್ನ ಪ್ರಿಯಕರನಿಗೆ ಇದು ತಿಳಿಯಬೇಕು." ಎಂದು ಗಟ್ಟಿಯಾಗಿ ನುಡಿದಳು.

ಆಗಿನ ನನ್ನ ಮನಸ್ಥಿತಿಯನ್ನು ವಿವರಿಸಲು ಸಾಧ್ಯವಿಲ್ಲ. ಆದರೂ ಆ ಕಾಡಿನ ಮನೆಯಲ್ಲಿದ್ದಾಗ ನಾನೇಕೆ ಹೆದರಿದೆ ಎಂಬುದು ಆಗ ಸ್ಪಷ್ಟವಾಯಿತು. "ಇದು ಅಶಕ್ಯ. ನನ್ನ ಗಂಡನು ಯುದ್ಧಕ್ಕೆ ಹೋಗಿ ಎಂಟು ತಿಂಗಳಾಯಿತು. ಆತ ನನ್ನು ಬಿಟ್ಟು ನಾನು ಬೇರೊಬ್ಬನನ್ನು ದುಷ್ಟಬುದ್ಧಿಯಿಂದ ಕಣ್ಣೆತ್ತಿ ನೋಡಿದ್ದರೆ ದೇವರಾಣೆ. ಹೀಗಾಗಿರುವರು ಅಶಕ್ಯ " ವೆಂದು ತಿಳಿಸಿದೆ.

" ಇಂದಿನ ಯುಗವೇ ಚಮತ್ಕಾರದ ಯುಗ. ನೀನು ಇನ್ನು ಆರು ತಿಂಗಳಲ್ಲಿ ತಾಯಿಯಾಗುವೆ. ನಿನ್ನಂಥ ಅನೇಕರು ಸುತ್ತಲಿನ ಹಳ್ಳಿಗಳಲ್ಲಿದ್ದಾರೆ. ಇತ್ತೀಚಿನ ಹುಡುಗಿಯರಿಗೆ ಒಬ್ಬನನ್ನು ನಂಬಿಕೊಂಡಿರುವದೇ ಅಸಾಧ್ಯವಾಗಿದೆ " ಎಂದು ಅವಳು ಮೂದಲಿಸಿದಳು.

ಆ ಮುದುಕಿ ಅಲ್ಲಿಂದ ಹೊರಟುಹೋದಳು. ಕೋಣೆಯಲ್ಲಿ ನಾನೊಬ್ಬಳೇ ಬಿದ್ದುಕೊಂಡಿದ್ದೆ. ಇದೆಲ್ಲ ಬರಿ ಕನಸಾಗಬಾರದೆ ಎಂದು ನಾನು ಸಂತಪಿಸಿದೆ. ಆದರೆ ಇದು ಎದುರಿಸಲಸಾಧ್ಯವಾದ ಕಠೋರ ಸತ್ಯವಾಗಿತ್ತು. ಒಂದೊಂದಾಗಿ ಕಾಡಿನ ಮನೆಯಲ್ಲಿಯ ಸಂಗತಿಗಳ ನೆನಪು ಬರಹತ್ತಿತು. ಅಡುಗೆ ಮನೆಯಲ್ಲಿ ಮೂರ್ಛೆಹೋದದ್ದು. ನಂತರ ಕೋಣೆಯಲ್ಲಿ ನನ್ನನ್ನು ತಂದು ಮಲಗಿಸಿದ್ದು. ಒದಿಯಲ್ಲಿ ಆ ದುಷ್ಟನು ಮಂಡಿಸಿದ್ದು, ಅವನೇ ನನ್ನನ್ನು ಕೆಡಿಸಿದನೆ ? ಹುಚ್ಚಿಯಂತೆ ಒಮ್ಮೆಲೆ ಅರಿಚಿ ನಾನು ಮನೆಬಿಟ್ಟು ಹೊರಬಿದ್ದೆ.

ಆ ಕಾಡಿನ ಮನೆಯನ್ನು ಮುಟ್ಟಿದಾಗ ಸಂಜೆಯಾಗಿತ್ತು. ನಾನು ನೇರವಾಗಿ ಅಡುಗೆಮನೆಯನ್ನು ಹೊಕ್ಕೆ. ನನ್ನನ್ನು ನೋಡಿದ ಕೂಡಲೆ ಅಡುಗೆಯವಳು ಹೆದರಿ ಕೂಗಿಕೊಂಡಳು.

" ನಿಮ್ಮ ಯಜಮಾನನೆಲ್ಲಿ ? ನೋಡಬೇಕಾಗಿದೆ "

" ಅವರೀಗ ಕೆಲಸದಲ್ಲಿದ್ದಾರೆ " ಎಂದು ಅವಳು ಬಾಗಿಲಕ್ಕೆ ಅಡ್ಡ ನಿಂತು ದಾರಿ ಕಟ್ಟಿದಳು. ಅವಳು ನನಗಿಂತ ದೊಡ್ಡವಳಿದ್ದರೂ ಸಿಟ್ಟಿಗೆದ್ದ ನಾನು ಅವಳನ್ನು ಸುಲಭವಾಗಿ ದೂಡಿ ನೆಲಕ್ಕೆ ಕೆಡಹಿ ಒಳಹೊಕ್ಕೆ. ಮೇಲಿನ ಕೋಣೆಯನ್ನು ತಲುಪಿದ ಕೂಡಲೆ ತೀರ ಆಚೆಯ ತುದಿಯಿಂದ ದನಿ ಕೇಳಿಸುತ್ತಿದ್ದರಿಂದ ಸದ್ದಿಲ್ಲದೆ ಬಾಗಿಲನ್ನು ತೆರೆದು ಒಳಗಿನ ತೆರೆಯಮರೆಯಲ್ಲಿ ನಿಂತು ಅವರ ಸಂಭಾಷಣೆಯನ್ನು ಕೇಳತೊಡಗಿದೆ. ಬರಬರುತ್ತ ನನಗೆ ಅದರ ಅರ್ಥವಾಗಹತ್ತಿತು.

ಅವರ ಸಂಭಾಷಣೆ ಈ ಕಾಗದದಲ್ಲಿದೆ. ತಮ್ಮ ಅಸ್ವಾಭಾವಿಕ ಪೈಶಾಚಿ ಯೋಜನೆಗಾಗಿ ಇವರು ನನ್ನಂಥ ಇನ್ನೂ ಅನೇಕ ನಿಷ್ಪಾಪ ಬಾಲಿಕೆಯರ ಕೌಮಾರ್ಯಭಂಗ ಮಾಡಿದ್ದಾರೆಂದು ಹೇಳಿದರೆ ಸಾಕು. ಅವರು ಆ ಕೋಣೆ

ಯಿಂದ ಹೊರಟುಹೋಗುತ್ತಿರುವಾಗ ಅವರು ಯಾರೆಂಬುದರ ಗುರುತು ಸಿಕ್ಕಿತು. ಅವರಲ್ಲೊಬ್ಬನನ್ನು ಉಳಿದವರು ಹೆಜ್ಜೆ ಹೆಜ್ಜೆಗೂ "ಪ್ರಭೂ, ಮಹಾಸ್ವಾಮಿ" ಎಂದು ಸಂಬೋಧಿಸುತ್ತಿದ್ದರು.

ಅಂಥ ಬಲಿಷ್ಠರನ್ನು ನಾನು ಹೇಗೆ ಎದುರಿಸಬಲ್ಲೆ. ಅವರು ಹೋದ, ನಂತರ ನಾನು ಅವರು ಕುಳಿತಿದ್ದ ಮೇಜಿನ ಕಡೆಗೆ ಧಾವಿಸಿದೆ. ಅದರ ಮೇಲೆ ಅನೇಕ ಕಾಗದ ಪತ್ರಗಳು ಅಸ್ತವ್ಯಸ್ತವಾಗಿ ಹರಡಿದ್ದವು. ಜರ್ಮನ ಸಾಮ್ರಾಟರ ಮೊಹರಿನ ಕಾಗದವೊಂದು ನನ್ನನ್ನು ಆಕರ್ಷಿಸಿದ್ದರಿಂದ ನಾನದನ್ನು ಎತ್ತಿಕೊಂಡು ಆ ಮನೆಯಿಂದಲೇ ಹುಚ್ಚಿಯಂತೆ ಕಾಡಿನಲ್ಲಿ ಧಾವಿಸಿದೆ.

ನಂತರ ನಾನು ಪಟ್ಟ ಪಾಡನ್ನು ಹೇಳಿದರೂ ಮುಗಿಯುವಂತಿಲ್ಲ. ಸಾಧ್ಯವಿದ್ದಷ್ಟು ದಿನ ನನ್ನ ಬಸಿರನ್ನು ಬಚ್ಚಿಟ್ಟೆ. ನನ್ನ ತಾಯಿಗೆ ಮಾತ್ರ ಗೊತ್ತಾಗಿತ್ತು. ಆ ಕಾಡಿನ ಮನೆಯಲ್ಲಿ ನಾನು ರಾತ್ರಿ ಕಂಡುದನ್ನೆಲ್ಲ ಹೇಳಿ ನನ್ನ ತಾಯಿಗೆ ಆ ಕಾಗದ ತೋರಿಸಿದ ಕೂಡಲೆ ಅವಳು ಹೆದರಿಕೊಂಡು ಸುಮ್ಮನಿರಲು ಉಪದೇಶಿಸಿದಳು.

ನಂತರ ಒಂದಿನ ನನ್ನ ಗಂಡ ಹಿಂತಿರುಗಿದ ಅವನು ನನ್ನನ್ನು ಕೊಲ್ಲುವನೆಂದು ಭಾವಿಸಿದ್ದೆ ಅವನ ಕೈಯಿಂದ ಸಾವನ್ನು ಬಯಸುತ್ತಿದ್ದೆ. ಆದರೆ ನಾನು ಅವನಿಗೆ ಮೋಸ ಮಾಡಿಲ್ಲೆಂದು ಸಾಯುವ ಮುನ್ನ ತಿಳಿಸಬೇಕೆಂದು ಆಶಿಸಿದ್ದೆ. ನಡೆದುದೆಲ್ಲವನ್ನು ಹೇಳಿ ನನ್ನ ತಾಯಿಗೆ ತೋರಿಸಿದ ಕಾಗದವನ್ನು ಅವನಿಗೂ ತೋರಿಸಿದೆ.

"ಸರಕಾರೀ ಆಜ್ಞೆ. ಈ ರಾಜ ಮನೆತನದವರ ಬಾಳಿಗೆ ಬೆಂಕಿ ಹಾಕಲಿ. ಇಂಥವರಿಗಾಗಿ ನಾವು ರಣರಂಗದಲ್ಲಿ ಪ್ರಾಣ ಅರ್ಪಿಸಬೇಕೆ?" ಎಂದು ಕ್ರುದ್ಧನಾಗಿ ನುಡಿದ.

ಅವನ ಆ ನುಡಿ ಕೇಳಿ ನಾನು ನಡುಗಿದೆ. ಕೆಲ ದಿನಗಳ ನಂತರ ಯಾವನೊ ಒಬ್ಬ ಹುಚ್ಚನು ರಾಜ ಕುಮಾರನ ಪ್ರಾಣಾಪಹರಣಕ್ಕಾಗಿ ಪ್ರಯತ್ನಿಸಿದನು. ಆದರೆ ಬೆಂಗಾವಲಿನವರು ಅವನನ್ನು ಗುಂಡಿನಿಂದ ಸುಟ್ಟು ಹಾಕಿದರು ಎಂಬ ಸುದ್ದಿ ಪತ್ರಿಕೆಗಳಲ್ಲಿ ಬಂತು. ಆ ಹುಚ್ಚನ ಹೆಸರು ಪ್ರಸಿದ್ಧವಾಗಿದ್ದಿಲ್ಲ. ಆದರೆ ಅವನು ನನ್ನ ಗಂಡನೆಂದು ಅದೇಕೊ ನನ್ನ ಮನಸಿಗೆ

ಖಂಡಿತವಾಯಿತು. ನನಗಾಗಿ ಸೇಡು ತೀರಿಸಿಕೊಳ್ಳಲು ಹೋಗಿ ಪ್ರಾಣ ವನ್ನರ್ಪಿಸಿದ.

ಕೆಲ ದಿನಗಳನಂತರ ನಾನು ಬಾಣಂತಿಯಾದೆ. ನನ್ನ ಕೂಸನ್ನು ನಾನು ಆಸಕ್ತಿಯಿಂದ ಕಾಣುತ್ತಿದ್ದೆ. ಕೆಲವಾರಗಳ ನಂತರ ಸರಕಾರಿ ಆಜ್ಞೆ ಯನ್ನು ಪಡೆದುಕೊಂಡ ಬಂದ ಇಬ್ಬರು ಅಧಿಕಾರಿಗಳು ಬಂದು ನನ್ನ ಕೂಸನ್ನು ಡಾರ್ಮಸ್ಟಾಟ ಅನಾಥಾಲಯಕ್ಕೆ ಕೊಡಬೇಕೆಂದು ಕೇಳಿದರು. ಶನಿ ತೊಲಗಿದರೆ ಸಾಕೆಂದು ಕೂಸನ್ನು ಒಪ್ಪಿಸಿಬಿಟ್ಟೆ. ಅಂದಿನಿಂದ ನನ್ನಲ್ಲಿ ಕೇವಲ ಸೇಡಿನ ಬುದ್ಧಿಯೆ ಒಡಮೂಡಿದೆ. ಅದಕ್ಕಾಗಿ ನನಗೆ ಸೌಕರ್ಯ ಒದಗಿಸಿಕೊಡಲಾಗುವದು ಎಂದು ಇವನು ಹೇಳಿದ್ದರಿಂದ ನಾನಿಲ್ಲಿಗೆ ಬಂದಿದ್ದೇನೆ. ಇವು ನನ್ನ ಕತೆಯ ಹಾಳೆಗಳು. ಇದು ಸರಕಾರೀ ಕಾಗದ್ಪ, ಎಂದು ಕಾಗದದ ಎರಡೂ ಕಟ್ಟುಗಳನ್ನು ಅವರಿಗೆ ಒಪ್ಪಿಸಿದಳು.

ಅವಳು ಮಾತು ಮುಗಿಸಿ ಕೆಲ ನಿಮಿಷ ಮೌನದಿಂದಿದ್ದಳು. ಅವಳು ಕೊಟ್ಟ ಕಾಗದದಲ್ಲಿ ಏನಿದೆಂಬುದನ್ನು ರಾಜಕುಮಾರನೂ ಸ್ಕಾಟನೂ ಆತ್ರುರದಿಂದ ನಿರೀಕ್ಷಿಸುತ್ತಿದ್ದರು.

" ಈ ಸಂಗತಿ ಜನರಿಗೆ ತಿಳಿದರೆ ಇಡೀ ಪ್ರಶಿಯಾದ ಜನರೆಲ್ಲ ದಂಗೆ ಏಳುವದರಲ್ಲಿ ಸಂದೇಹವಿಲ್ಲ. ದೈವವೇ! ಕೇವಲ ಸಾಮ್ರಾಟನ ಮಹತ್ವಾಕಾಂಕ್ಷೆಯನ್ನು ಪೂರೈಸುವದಕ್ಕಾಗಿ ಯುದ್ಧದಲ್ಲಿ ಬಲಿಗೊಡಲು ಜನರನ್ನು ಪಡೆಯುವದಕ್ಕಾಗಿ ತಮ್ಮಲ್ಲಿಯ ಸಾವಿರಾರು ಜನರನ್ನು ಹೆರಿಗೆಯ ಯಂತ್ರ ಗಳೆಂದು ಉಪಯೋಗಿಸಿಕೊಳ್ಳಲಾಗುತ್ತಿದೆಂಬುದು ಜನತೆಗೆ ತಿಳಿದರೆ ಪ್ರತಿಯೊಬ್ಬ ಸ್ತ್ರೀ ಪುರುಷನು ಸೇಡು ತೀರಿಸಿಗೊಳ್ಳುವಹ ವ್ಯಾಸಕ್ಕೆ ಬೀಳದಿರನು" ಎಂದು ರಾಜಕುಮಾರನು ಆವೇಶದಿಂದ ಮೇಜನ್ನು ಗುದ್ದಿದನು.

" ಇನ್ನು ಆ ದುರ್ದೈವಿಗಳು! ತಮ್ಮನ್ನು ಹುಟ್ಟಿಸಿದ ಕಾರಣವೇನೆಂಬುದು ಅವರಿಗೆ ತಿಳಿದರೆ ಅವರೇ ಈ ವಿಷಯದಲ್ಲಿ ಪ್ರಮುಖ ಭಾಗವಹಿಸಬಹುದು."

"ಈ ಕಾಗದದಲ್ಲಿ ಹೇಳಿದಂತೆ ಅವರು ತರಬೇತಿ ಹೊಂದಿದರೆ ಅವರ ಪಾಶವೀಬಲ ಹೆಚ್ಚಿನದೆಂದೇ ನಂಬಬೇಕು. ' ಪಿತೃಭೂಮಿಯೆ ಧರ್ಮ, ರಾಜನೇ

ದೇವರು' ಎಂದು ಈ ಕಾಗದಲ್ಲಿದೆ ನೋಡಿದೆಯಾ" ಎಂದ ರಾಜಕುಮಾರ.

"ಬಲಿಗೆ ಬಿದ್ದ ಪಶುವಾದರೂ ಕೆರಳಿತೆಂದರೆ ತನ್ನ ಯಜಮಾನನ್ನೇ ಈಡಾಡದಿರದು."

"ಈ ಕಾಗದದಲ್ಲಿ ಉಲ್ಲೇಖಿತನಾದ ಪ್ರೊ. ವರ್ನರ ಯಾರು ತಿಳಿಯುಲಿಲ್ಲವಲ್ಲ?"

"ನಾನು ಹೇಳಬಲ್ಲೆ" ಎಂದು ಇದುವರೆಗೆ ಮೌನಿಯಾಗಿದ್ದವನು ಹೇಳಿದ. ಆ ಹೆಂಗಸಿನ ಕಣ್ಣುಗಳಲ್ಲಿ ಮಿಂಚು ತೋರಿತು.

"ನಿನಗೆ ಗೊತ್ತಿದೆಯೆ?" ಎಂದು ಅವಳು ಉತ್ಸುಕತೆಯಿಂದ ಪ್ರಶ್ನಿಸಿದಳು.

"ಇಲ್ಲ, ಆದರೆ ಅವನ ಬಗ್ಗೆ ಕೇಳಿ ತಿಳಿದಿದ್ದೇನೆ. ೧೯೩೯ರಲ್ಲಿ ನಾನು ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಜೇನಾ ವಿಶ್ವ ವಿದ್ಯಾಲಯದ ಪ್ರೊ. ವರ್ನನರ ವೈಜ್ಞಾನಿಕ ಸಂಶೋಧನಗಳ ಬಗ್ಗೆ ವಿದ್ಯಾರ್ಥಿಗಳು ಮಾತಾಡಿಕೊಳ್ಳುತ್ತಿದ್ದರು. ಅವಳ ಕೆಲವು ಸಂಶೋಧನೆಗಳು ಅತ್ಯದ್ಭುತವಾಗಿದ್ದವು ನಾವು ಆ ಪ್ರಖ್ಯಾತ ವಿಜ್ಞಾನಿಯನ್ನು ಕಾಣಬಯಸಿದೆವು. ಆದರೆ ಅಷ್ಟರಲ್ಲಿ ಯುದ್ಧ ಪ್ರಾರಂಭವಾಯಿತು."

"ಹಾಗಿದ್ದರೆ ಅವನು ೧೯೧೩ರಲ್ಲಿ ಆ ವಿಶ್ವವಿದ್ಯಾಲಯದಿಂದ ನಿವೃತ್ತನಾದನು. ಆರೇಳು ವರ್ಷಗಳ ಹಿಂದೆ ಅವನು ಗೋಲಸಾರದಲ್ಲಿ ಮರಣ ಹೊಂದಿದನು. ಪತ್ರಿಕೆಗಳ ತುಂಬ ಅವನ ನಿಧನದ ಬಗ್ಗೆ ದುಃಖಾಶ್ರುಗಳೇ ಬಂದಿದ್ದವು." ಎಂದು ಸ್ಮಿಟನು ಹೇಳಿದ.

"ಹಾಗಿದ್ದರೆ ನಿಮಗೆ ಬೇಕಾದವನು ಅವನೇ ಆದಂತಾಯಿತು. ಅವನು ವಿಶ್ವವಿದ್ಯಾಲಯದಿಂದ ಹೊರಬಿದ್ದನಂತರ ತನ್ನ ಮರಣದ ವರೆಗೆ ಯಾವ ಕಾರ್ಯದಲ್ಲಿ ತೊಡಗಿದ್ದನೆಂಬುದನ್ನು ಶೋಧಿಸಬೇಕು. ಇಂಥ ಯೋಜನೆಯಲ್ಲಿ ಎಲ್ಲವೂ ವ್ಯವಸ್ಥಿತ ರೀತಿಯಿಂದ ಸಾಗಿರಬೇಕು. ವರ್ನರನು ತನ್ನ ಪ್ರಯೋಗಳ ಫಲಿತಾಂಶಗಳನ್ನು ಎಲ್ಲಿಯೊ ಬರೆದಿಟ್ಟಿರಬೇಕು. ಇದನ್ನು ಶೋಧಿಸುವದು ನಿನ್ನ ಕೆಲಸ, ಸ್ಮಿಟ. ಆ ನಂತರ ಏನು ಮಾಡಬೇಕೆಂಬುದನ್ನು ನಿರ್ಧರಿಸೋಣ. ಅಲ್ಲಿಯವರೆಗೆ ಫ್ರಾಂಜನು ಜನರಲ್ಲಿ ಹೊತ್ತಿದ್ದ ಅಸಂ

ತೋಷದ ಬೇಗೆಯನ್ನು ಪ್ರುಟಗೊಳಿಸಲಿ. ನಿನಗೂ ಸೇಡು ತೀರಿಸಿಕೊಳ್ಳಲು ಎಲ್ಲ ಸೌಕರ್ಯ ಒದಗಿಸಿಕೊಡಲಾಗುವದು " ಎಂದು ರಾಜಕುಮಾರನು ತಿಳಿಸಿದನು.

ಕೂಡಲೆ ಏನೊ ಹೊಳೆದ-ತಾಗಿ "ನೀನು ನಿನ್ನ ಕೂಸನ್ನು ಒಯ್ದ ಡರ್ಮಸ್ಟಾಟ ಅಸಾಥಾಲಕ್ಕೆ ಹೋಗಿ ಅವನ ಸ್ಥಿತಿಗತಿ ವಿಚಾರಿಸತಕ್ಕದ್ದು' ಎಂದು ಅವನು ಆಕೆಗೆ ಹೇಳಿ ಕೈತುಂಬ ಹಣಕೊಟ್ಟ ಇದು "ನಿನ್ನ ಪ್ರವಾಸದ ವೆಚ್ಚ. ನೀನು ನಿನ್ನ ಮಗನನ್ನು ಶೋಧಿಸಿ ಅವನನ್ನು ಕಂಡದ್ದಾದರೆ ಬಂದು ಸ್ಮಿಟಿಗೆ ತಿಳಿಸಬೇಕು. ಒಬ್ಬನನ್ನು ಕಂಡು ಹಿಡಿದ ನಂತರ ಉಳಿದವರನ್ನು ಶೋಧಿಸಲಿಕ್ಕೇನೂ ತಡಹಿಡಿಯಲಾರದು. ಪ್ಲೀಜ, ನಿನಗಿನ್ನೂ ಕೆಲವು ಸೂಚನೆಗಳನ್ನು ಕೊಡತಕ್ಕದ್ದಿದೆಂದು ರಾಜಕುಮಾರ ಫ್ರೆಡರಿಕನು ಅವನನ್ನು ಕರೆದುಕೊಂಡು ಹೋದನು.

೪

" ಎಲ್ಸಾ ಸೀಬರ್ಟ ನಮ್ಮನ್ನು ಮರೆತುಬಿಟ್ಟೆಯಾ ? "

ಓದುತ್ತಿದ್ದ ಪುಸ್ತಕದೊಳಗಿಂದ ಅವಳು ತಲೆಯನ್ನು ಮೇಲಕ್ಕೆತ್ತಿದಾಗ ಪ್ರಶಿಯಾದ ರಾಜಕುಮಾರನು ಅವಳೆದುರು ನಿಂತಿದ್ದನು. ನೃತ್ಯಾಗಾರದಲ್ಲಿ ಅವನಿಗೆ ಎಲ್ಸಾಳ ಪ್ರಥಮ ಪರಿಚಯವಾದಂದಿನಿಂದ ಇಂದಿಗೆ ಮೂರು ವಾರಗಳು ಉರುಳಿಹೋಗಿದ್ದುವು. ಎಲ್ಸಾಳು ರಾಜಕುಮಾರಿಯ ಸಂಗಾತಿಯೆಂದು ಅರಮನೆಯಲ್ಲಿಯೇ ಬಂದಿದ್ದಳು. ಅದೊಂದು ಅವಳಿಗೆ ಸಂಭ್ರಮದ ಕೆಲಸವೆನಿಸಿತ್ತು. ಎಲ್ಸಾಳಿಗಿಂತ ಅನೇಕ ವರ್ಷ ಮೊದಲು ಸಂಗಾತಿಯೆಂದು ಬಂದು ಸೇರಿದ್ದ ವಿಡಲರ್ಟರು ಆಗಾಗ ಸುಳ್ಳು ಸಂಗತಿಗಳನ್ನು ಹಬ್ಬಿಸಿ ಅವಗಿವರ ಮುಖಕ್ಕೆ ಕಪ್ಪು ಬಳಿಯುವ ಕಾಯಕದಲ್ಲಿ ತನ್ನ ಸ್ವಭಾವಕ್ಕನುಗುಣವಾಗಿ ನಿರತಳಾಗಿದ್ದಳು. ಹೆಚ್ಚು ಸ್ವಾತಂತ್ರ್ಯದ ವಾತಾವರಣದಲ್ಲಿ ಬೆಳೆದಿದ್ದ ಎಲ್ಸಾಳಿಗೆ ವಿಡಲರ್ಟಳೊಡನೆ ಹೊಂದಿಕೊಂಡಿರುವದು ಕಠಿಣವಾಗಿತ್ತು. ಆದ್ದರಿಂದ ಸುಖದ ವಾತಾವರಣದಲ್ಲಿದ್ದ ಎಲ್ಸಾಳಿಗೆ ಇದೊಂದು ವಿಧದ ತೊಂದರೆಯಾಗಿತ್ತು.

ನೃತ್ಯಾಗಾರದಲ್ಲಿ ಆದ ಪರಿಚಯದ ಪರಿಯನ್ನು ಅರಿತುಕೊಂಡ ಎಲ್ಸಾಳು ರಾಜಕುಮಾರನಿಂದ ಆದಷ್ಟು ದೂರ ಇರಲು ಪ್ರಯತ್ನಿಸುತ್ತಿದ್ದಳು. ಆದರೆ ಇಂದು ಅವಳಿಗೆ ಏಕೋ ಬೇಸರ ಬಂದದ್ದರಿಂದ ರಾಜಕುಮಾರನ ಆಗಮನವನ್ನು ಮನಸಾ ಸ್ವಾಗತಿಸಿದಳು.

" ವಿನೋದದಿಂದ ಅಂದು ಆಡಿದ ಕೆಲವು ನುಡಿಗಳನ್ನು ತಾವಿನ್ನೂ ಮರೆಯದಿದ್ದುದು ಆಚ್ಚರಿಯ ಸಂಗತಿ " ಎಂದು ಅವನ ನಗುಮೊಗವನ್ನು ನೋಡಿದಳು.

ರಾಜಕುಮಾರನು ಅವಳ ಕೋಮಲ ಹಸ್ತವನ್ನು ಎತ್ತಿಕೊಂಡು ಮುದ್ದಿಸಿದ.

" ಜಾಗ್ರತೆಯಿಂದಾಡಿದ ನುಡಿಗಳಿಗಿಂತ ವಿನೋದದ ನುಡಿಗಳಲ್ಲಿಯೇ ಸತ್ಯಾಂಶ ಹೆಚ್ಚಾಗಿರುತ್ತದೆ. ಈಗ ನಿನ್ನ ಸ್ನೇಹವನ್ನು ಕೋರಿ ಬಂದಿದ್ದೇನೆ. ನೀಡುವಿಯಾ ? " ಎಂದನು.

" ಪ್ರತಿಯಾದ ರಾಜಕುಮಾರನಲ್ಲಿಯೂ ಸಾಮಾನ್ಯ ಎಲ್ಸಾಳಲ್ಲಿಯೂ ಎಲ್ಲಿಯ ಸ್ನೇಹ ಸಂಬಂಧ " ಎಂದು ಎಲ್ಸಾಳು ತನ್ನ ಕೈಬಿಡಿಸಿಕೊಂಡಳು

" ಹಾಗೆ ಹೇಳದಿರು ಎಲ್ಸಾ. ನಿನ್ನ ಸಹವಾಸದಲ್ಲಿ ನಾನು ರಾಜಕುಮಾರನೆಂಬುದನ್ನು ಕ್ಷಣಮಾತ್ರವಾದರೂ ಮರೆತುಬಿಡಲು ಅವಕಾಶ ಕೊಡು. ನಿನ್ನ ಸ್ನೇಹಪಾತ್ರನಾದ ಸಾಮಾನ್ಯ ಅಧಿಕಾರಿಯೆಂದೇ ಭಾವಿಸು " ಎಂದವನು ಕಳಕಳಿಯಿಂದ ಬೇಡಿಕೊಂಡ.

ಎಲ್ಸಾ ಅವನನ್ನು ದೃಷ್ಟಿಸಿದಳು. ತುಟಿಗಳಲ್ಲಿ ಕಿರುನಗೆಯಿದ್ದರೂ ಕಣ್ಣುಗಳಲ್ಲಿ ದೈನ್ಯ ತುಂಬಿತ್ತು. ಬೇಡಿದ್ದನ್ನು ಪಡೆದುಕೊಳ್ಳಲು ಸಮರ್ಥನಾಗಿದ್ದ ಇವನು ತನ್ನ ಸ್ನೇಹಕ್ಕಾಗಿ ಇಷ್ಟೊಂದು ಅಲ್ಪರೆಯುತ್ತಿರುವದನ್ನು ಕಂಡು ಅವಳಿಗೆ ಕನಿಕರವೆನಿಸಿತು. ರಾಜಕುಮಾರನ ಬಿನ್ನಹದಿಂದ ಅವಳು ಬುರುಬುರನೆ ಉಬ್ಬಿಹೋದಳು. ತರುಣರು ತರುಣಿಯರಲ್ಲಿ ಸ್ನೇಹಯಾಚನೆ ಮಾಡುವಾಗ ಆ " ಸ್ನೇಹ " ಶಬ್ದವು " ಪ್ರೇಮ " ಶಬ್ದದ ಇನ್ನೊಂದು ರೂಪವೆಂಬುದನ್ನು ಆ ನವತರುಣಿಯರು ಮರೆತೇ ಬಿಡುತ್ತಾರೆ.

" ನನ್ನ ಸ್ನೇಹವನ್ನು ತಾವಿಷ್ಟೊಂದು ಗೌರವಿಸುತ್ತಿದ್ದರೆ ನಾನು ಒಪ್ಪು

ತ್ತೇನೆ. " ಎಂದು ಅವಳ ಸ್ನೇಹ ನೀಡಲೆಂದೋ ತನ್ನ ಕೈಗಳನ್ನು ಮುಂದೆ ಚಾಚಿದಳು.

"ಉಪಕೃತನಾದೆ, ನಾನಿದನ್ನು ಕಾಪಾಡಿಕೊಳ್ಳಬಲ್ಲೆನೆ? ಏನಾಯಿತು? ನಾನೇನಾದರೂ ಬಿರುನುಡಿಗಳನ್ನಾಡಿದೆನೆ?" ಎಂದು ರಾಜಕುಮಾರನು ತನ್ನ ಕೈಗಳನ್ನು ಬಿಡಿಸಿಕೊಳ್ಳುತ್ತಿರುವ ಎಲ್ಸಾಳನ್ನು ಪ್ರಶ್ನಿಸಿದನು.

"ಇಲ್ಲ. ಇಲ್ಲ. ಬಿಸಲಿನ ತಾಪದಿಂದ ಏನೋ ಇಂದು ತಲೆಶೂಲಿ"

"ನಿನ್ನ ವಚನವನ್ನು ಇಷ್ಟು ಬೇಗನೆ ಮರೆತುಬಿಟ್ಟೆಯಾ? ಈ ರೀತಿ ಸ್ನೇಹಿತರನ್ನು ವಂಚಿಸುವದು ತರವಲ್ಲ ನಿಜವನ್ನು ಮರೆಮಾಡುವದೇಕೆ?" ಎಂದು ಅವಳ ಸುಕುಕೋಮಲ ಕರಗಳನ್ನು ಅಧೀರನಾಗಿ ಎದೆಗವಚಿ ಕೊಂಡನು.

"ಒಮ್ಮೆ ಕೊಟ್ಟಿದ್ದನ್ನು ಹಿಂತೆಗೆದುಕೊಳ್ಳುವುದಿಲ್ಲ ನಾನು ಆದರೆ,—" ಕೆಳದನಿಯಲ್ಲಿ ಆಡಿದಳು.

"ಪ್ರಭೂ, ಸಾಮ್ರಾಟರು ನಿಮ್ಮ ಆಗಮನವನ್ನು ನಿರೀಕ್ಷಿಸುತ್ತಿದ್ದಾರೆ" ಎಂದು ಅಧಿಕಾರಿಯೊಬ್ಬನು ಗಟ್ಟಿಸಿ ನುಡಿದಾಗ ಅವರು ಹೆದರಿ ಅಗಲಿದರು.

ವಿಲಿಯಂ ರಾಜಕುಮಾರ ಮುನಿದೆದ್ದನು.

"ಒಂದು ನಿಮಿಷ ಕೂಡ ವಿಶ್ರಾಂತಿಯಿಲ್ಲ. ಕ್ಷಮಿಸು. ಎಲ್ಸಾ ತಂದೆ ಯವರ ಕಡೆಗೆ ಹೋಗಬೇಕಾಗಿದೆ." ಎಂದು ರಾಜಕುಮಾರನು ಆ ಅಧಿ ಕಾರಿಯ ಹಿಂದೆ ಸಾಗಿದನು.

* * *

ಸಾಮ್ರಾಟನು ಮಂತ್ರಾಗಾರದಲ್ಲಿ ಮೇಜಿನೆದುರು ಮಂಡಿಸಿದ್ದನು. ಅವನ ಎದುರಿಗೆ ನಿಂತಿದ್ದ ಇಬ್ಬರು ಸೇನಾಪತಿಗಳು ಬಾಗಿನಿಂತು ಮೇಜಿನ ಮೇಲೆ ಹರವಿದ್ದ ನಕಾಶೆಗಳನ್ನೂ ಬೇರೆ ಕಾಗದ ಪತ್ರಗಳನ್ನೂ ಪರೀ ಕ್ಷಿಸುತ್ತಿದ್ದರು.

"ಓ, ನೀನೆಲ್ಲಿಗೆ ಹೋಗಿದ್ದೆ? ನಿನ್ನನ್ನು ಹುಡುಕಲಿಕ್ಕೆ ಶೀಘ್ರರನ್ನು ಕಳಿಸಿ ಒಂದು ಗಂಟೆ ಮೇಲಾಯಿತು. ಈ ಕಾಗದ ಪತ್ರಗಳನ್ನು ನೋಡಿಕೊ.

ನಂತರ ನೀನೇನು ಮಾಡಬೇಕೆಂಬುದನ್ನು ಹೇಳುವೆನು." ಎಂದು ಸಾಮ್ರಾಟನು ತನ್ನ ಹಿರಿಯ ಮಗ ವಿಲಿಯಂನು ಅವನಿಗೆ ಬಂದೊಡನೆ ಹೇಳಿದ.

ವಿಲಿಯಂನು ಆ ಕಾಗದ ನಕಾಶೆಗಳನ್ನು ನೋಡಿ ಉಸಿರ್ಗರೆದ. ಈ ಕತ್ತಲು ಕವಿದ ಮಂತ್ರಾಗಾರದಲ್ಲಿ ವೈಜುಮ್ಮೆನ್ನಿಸುವ ಯುದ್ಧದ ಕಾಗದ ಪತ್ರಗಳನ್ನೂ ಅವಲೋಕಿಸುವದಕ್ಕಿಂತ ಆ ಸುರಸುಂದರಿಯ ಕೋಮಲ ಸ್ನೇಹಹಸ್ತವನ್ನು ಹಿಡಿದಿಟ್ಟುಕೊಂಡಿರುವುದು ಎಷ್ಟು ಸಂತೋಷ ದಾಯಕವಾಗಿತ್ತು ಅವನಿಗೆ. ತನ್ನ ಅಜ್ಜನ ರಾಜ್ಯ ನಾಶಕ್ಕೆ ಕಾರಣ ವಾದ ೧೯೧೪ರ ಪ್ರಥಮ ಜಾಗತಿಕ ಯುದ್ಧಕ್ಕಿಂತ ಭೀಕರವಾದ ಇನ್ನೊಂದು ಯುದ್ಧದ ಸಿದ್ಧತೆ ನಡೆದಿದೆ. ಈ ವಿಚಾರವೇ ರಾಜಕುಮಾರನಿಗೆ ಅಸಹ್ಯ ವಾಯಿತು. ಬರ್ಲಿನದಲ್ಲಿಯ ಜೀವನ ಈಗ ಸುಗಮವಾಗಿತ್ತು. ಅವನು ಪುನಃ ನಿಟ್ಟುಸಿರಿಟ್ಟ. ಬೇಸರದ ಈ ಕೆಲಸದಿಂದ ಆದಷ್ಟು ಬೇಗನೆ ಬಿಡುಗಡೆ ಹೊಂದಬೇಕಾದರೆ ಅದರಲ್ಲಿ ಆಸಕ್ತಿಯನ್ನು ತೋರಿಸುವದೊಂದೇ ಉಪಾಯವೆಂಬುದನ್ನು ಅವನು ಅನುಭವದಿಂದ ಕಲಿತದ್ದರಿಂದ ತಂದೆಯ ಹೇಳಿಕೆಯಂತೆ ಕಾಗದ ಪತ್ರಗಳನ್ನು ಓದುವದರಲ್ಲಿ ಮಗ್ನನಾದನು ಕೆಲ ನಿಮಿಷಗಳ ನಂತರ ಸಾಮ್ರಾಟನನ್ನು ದೃಷ್ಟಿಸಿದ.

"ಇವೊಂದೂ ನನಗೆ ಅರ್ಥವಾಗುವದಿಲ್ಲ; ಇನ್ನಾರು ತಿಂಗಳ ಇಂಗ್ಲಂಡಿನ ಮೇಲೆ ದಾಳಿ ನಡೆಯುವ ಸುದ್ದಿಯನ್ನು ಈ ಕಾಗದಗಳು ಹೇಳುತ್ತಿವೆ ಆದರೆ ಬ್ರಿಟನಿನ ಮೇಲೆ ದಾಳಿ ನಡೆಸಲು ಈಗ ಸಾಕಷ್ಟು ನೌಕಾ ಸಾಮರ್ಥ್ಯ ನಮ್ಮಲ್ಲಿಲ್ಲ. ಇನ್ನು ಮೂರು ವರ್ಷವಾದರೂ ಈ ಕಾರ್ಯ ಸಾಧ್ಯವಿಲ್ಲ ಎಂದು ನಮ್ಮ ನೌಕಾಧ್ಯಕ್ಷರ ವರದಿಯಿದೆ. ನಮ್ಮ ಕಾಲ್ಬಲದ ವಿಷಯದಲ್ಲಿಯೂ ತಪ್ಪು ಕಲ್ಪನೆ ಕಟ್ಟಿಕೊಳ್ಳುವದು ಬೇಡ. ನಮ್ಮ ಸಾಮರ್ಥ್ಯ ಸಾಕಷ್ಟಿದೆ ಯೆಂದು ಗ್ರಹಿಸಿದರೂ ನಮ್ಮ ಜನರು ಇನ್ನೊಂದು ಯುದ್ಧ, ಪರಾಭವದ ವಿಚಾರವನ್ನ ಸಹಿಸಲಾರರು" ಎಂದು ವಿಲಿಯಂ ತನ್ನ ಮನಸ್ಸನ್ನು ಬಿಚ್ಚಿ ಆಡಿದ.

"ಈ ಸಲ ನಮ್ಮ ಸೈನ್ಯ ಬಲವನ್ನು ಅವಲಂಬಿಸಿ ಇಂಗ್ಲಂಡಿನ ಮೇಲೆ ದಾಳಿ ಮಾಡುವದಿಲ್ಲ. ಯುದ್ಧ ನೀತಿಯ ವೈಶಿಷ್ಟ್ಯ ನಮ್ಮದಾಗಿದೆ "ಎಂದು

ಸಾಮ್ರಾಟನು ಬೆಲ್ಜಿಯಂದ ನಕಾಶವನ್ನು ವಿಲಿಯಂನದುರಿಗೆ ಚಾಚಿದ.

"ಗ್ರೀಗಳ ನೀತಿಯನ್ನೇ ಅನುಸರಿಸುವಿರಾ? ಪುನಃ ಬೆಲ್ಜಿಯಂದ ಮೇಲೆ ದಾಳಿ, ಪುನಃ ಅದೇ ಪರಿಣಾಮ. ಇದೆಂದಿಗೂ ನಡೆಯಲಾರದು." ಎಂದು ಹಿಯ್ಯಾಳಿಸಿದ.

"ಈ ಸಲ ಬೆಲ್ಜಿಯಂದ ಮೇಲೆ ದಾಳಿ ಮಾಡುವದಿಲ್ಲ. ನಮ್ಮ ದಾಳಿ ಮಾಡುವ ದಾರಿ ಬೇರೆಯಾಗಿದೆ." ಎಂದು ಸಾಮ್ರಾಟನು ಇನ್ನೂ ಒಗಟದ ಮಾತಿನಲ್ಲಿಯೇ ಹೇಳುತ್ತಿದ್ದ.

"ನನಗೇನೂ ತಿಳಿಯದು." ಎಂದ ವಿಲಿಯಂ ತ್ರಸ್ತನಾಗಿ. ಆಗ ಸೂರ್ಯ ಕಿರಣವೊಂದು ಮೇಜಿನ ಮೇಲೆ ಮೂಡಿ ಮರೆಯಾಯಿತು. ಎಲ್ಸಾಳ ಕೇಶ ಕಲಾಪಗಳಲ್ಲಿ ಕಂಡ ಮಿಂಚೊ ಎನಿಸಿತು ಅವನಿಗೆ ರೇಶಿಮೆಯಂಥ ಅವಳ ನೀಳ್ಗೂದಲುಗಳಲ್ಲಿ ತನ್ನ ಮುಖವನ್ನು ಮುಚ್ಚಿಕೊಂಡು ಯುದ್ಧ, ದಂಡಯಾತ್ರೆಗಳ ಭೀಕರ ವಿಚಾರಗಳನ್ನು ಮರೆಯಬೇಕೆಂದೆಣಿಸಿದ. ಆದರೆ ಅವನ ತಂದೆಯ ಕರ್ಕಶ ದನಿಯ ಅವನನ್ನು ಸತ್ಯಲೋಕಕ್ಕೆ ಎಳೆದು ತಂದಿತು.

"ಗ್ರೀಗಾಗರಲ್ಲಿ ನಾವು ಲಾಂಗ್ವಿ ಹತ್ತಿರದ ಗಣಿಗಳನ್ನು ವಶಪಡಿಸಿಕೊಂಡು ಅಲ್ಲಿ ನಮ್ಮ ಎಂಜಿನಿಯರರು ಜಗತ್ತಿನಲ್ಲಿಯೆ ಅತ್ಯದ್ಭುತವಾದ ಸುರಂಗ ಮಾರ್ಗವನ್ನು ಕೊರೆಯುವ ಪ್ರಯತ್ನ ಮಾಡಿದ್ದಿಲ್ಲವೆ' ಆ ನೆಲ ಮಾರ್ಗದಿಂದ ಬೆಲ್ಜಿಯಂ—ಇಂಗ್ಲಂಡಗಳನ್ನು ಜೋಡಿಸಬೇಕಾಗಿತ್ತು."

"ಅದೊಂದು ಸ್ವಪ್ನಸೃಷ್ಟಿಯ ಮಾತು"

"ಅದೇಕೆ, ಆ ಸುರಂಗ ಮಾರ್ಗವೀಗ ಸಿದ್ಧವಾಗಿದೆ: ನೀನದನ್ನು ಕಣ್ಣಾರೆ ನೋಡಬಹುದು."

"ಏನು! ಆ ಸುರಂಗ ಮಾರ್ಗವು ಸಿದ್ಧವಾಗಿದೆಯೆ?" ಎಂದು ಇದು ವರೆಗೆ ನಿರಾಸಕ್ತಿಯಿಂದಿದ್ದ ವಿಲಿಯಂನು ಪುಟದೆದ್ದು ಕೇಳಿದ.

"ನನಗೊಪ್ಪಿಸಿದ ವರದಿಯನ್ನು ಇವನಿಗೂ ತಿಳಿಸಿರಿ" ಎಂದು ಸಾಮ್ರಾಟನು ಸೇನಾಪತಿಗಳಿಗೆ ಅಜ್ಞೆಯಿತ್ತನು.

"ಗ್ರೀಗಳರ ಒಡಂಬಡಿಕೆಯ ಪ್ರಕಾರ ನಾವು ಲಾಂಗ್ವಿ ಕಣಿವೆಯ ಪ್ರದೇಶವನ್ನು ಫ್ರೆಂಚರಿಗೆ ಬಿಟ್ಟು ಕೊಡಬೇಕಾಯಿತು. ಆದರೆ ಮರು

ವರ್ಷವೆ ಫ್ರೆಂಚ ಸರಕಾರವು ಲಾಂಗ್ವಿ ಗಣಿಗಳ ಕೆಲಸವನ್ನು ಮುಂದು ವರಿಸಲು ಅಮೇರಿಕನ ಕಂಪನಿಯೊಂದಕ್ಕೆ ೫೦ ವರ್ಷಗಳ ಗುತ್ತಿಗೆ ಕೊಟ್ಟಿತು. ಆ ಕಂಪನಿಯು ಅಮೆರಿಕೆಯ ಯಹೂದಿಗಳಾಗಿದೆಂದು ಅವರು ನಂಬಿದ್ದ ರಿಂದ ಮತ್ತು ಅಲ್ಲಿ ದುಡಿಯಲು ಫ್ರೆಂಚ—ಮತ್ತು ಬೆಲ್ಜಿಯಂ ಕೂಲಿಕಾರ ರನ್ನೇ ನೇಮಿಸಿದ್ದರಿಂದ ಫ್ರೆಂಚರಿಗೆ ಯಾವ ಸಂದೇಹವೂ ಬರಲಿಲ್ಲ. ಆದರೆ ಅಲ್ಲಿಯೆ ಬೇರೊಂದೆಡೆ ನಮ್ಮ ಸ್ವೇಚ್ಛೆಯಂತೆ ಅತ್ಯದ್ಭುತ ಯಂತ್ರಗಳು, ಹುಳವು ಹಣ್ಣನ್ನು ಕೊರೆಯುವಂತೆ ಬೆಲ್ಜಿಯಂ ಫ್ರಾನ್ಸುಗಳ ಭೂಗರ್ಭ ವನ್ನು ಸೀಳುವದರಲ್ಲಿ ನಿರತವಾಗಿದ್ದವು. ಎಡೆಬಿಡದೆ ಅವು ತಮ್ಮ ಕಾರ್ಯ ವನ್ನು ಮುಂದರಿಸಿ ಉತ್ತರ ಸಮುದ್ರದ ಅಡಿಯಲ್ಲಿಯೂ ಸುರಂಗ ಮಾರ್ಗ ವನ್ನು ಕೊರೆದು ಈಗ ಇಂಗ್ಲಂಡ ಮಧ್ಯಭಾಗಕ್ಕೆ ತಲುಪಿವೆ. ಗಿಗಳರಲ್ಲಿ ನಮ್ಮನ್ನು ಮೂದಲಿಸಿದ ಬ್ರಿಟಿಷರ ದೇಶದ ಹೃದಯದಲ್ಲಿಯೆ ನಾವು ಬಯಸಿ ದಾಕ್ಷಣ ನಮ್ಮ ಸೈನಿಕರು ಕಾಣಿಸಿಕೊಳ್ಳಬಲ್ಲರು. ಅಂದರೆ ನಮ್ಮ ಸುರಂಗ ಮಾರ್ಗವಿಂದು ಸಿದ್ಧವಾಗಿದೆ." ಎಂದು ಸೇನಾಪತಿಯು ಹೇಳಿ ಮುಗಿಸಿದರೂ ರಾಜಕುಮಾರನು ಅವನನ್ನು ಬೆಕ್ಕಸ ಬೆರಗಾಗಿ ನೋಡುತ್ತ ನಿಂತಿದ್ದ.

"ಈ ಕಳ್ಳಕಿಂಡಿಯು ಸಿದ್ಧವಾದುದು ಅದ್ಭುತ ಸಂಗತಿಯೇನೋ ನಿಜ. ಅದರೆ ಯುದ್ಧದ ಕರೆಗೆ ನಮ್ಮ ಸೈನಿಕರು ಓ ಗೊಡುವರೆ ? ಯುದ್ಧದ ಅನಾ ಹುತಗಳನ್ನು ಅವರು ಎದುರಿಸಬಲ್ಲರೆ ? ಪ್ರಥಮ ಜಾಗತಿಕ ಯುದ್ಧವನ್ನು ನಮ್ಮಲ್ಲಿ ಇನ್ನೂ ಕೆಲವರು ಮರೆತಿಲ್ಲ. ಸೈನಿಕರಲ್ಲಿ ಸಾಕಷ್ಟು ಉತ್ಸಾಹವೇ ಉಳಿದಿಲ್ಲ" ಎಂದ ರಾಜಕುಮಾರ.

"ಇಂಗ್ಲಂಡದ ಮೇಲೆ ದಾಳಿ ನಡೆಯಿತು ಎಂಬ ಸುದ್ದಿಯನ್ನು ಕೇಳಿ ನಮ್ಮ ಸೈನಿಕರಲ್ಲಿ ರಣೋತ್ಸಾಹ ತುಂಬುವದು. ಇಂಗ್ಲಂಡದ ದಾಳಿಗಾಗಿ ಈ ಸಲ ಬೇರೆ ಜನರನ್ನು ವಿಶೇಷ ಲಕ್ಷ್ಯಪೂರ್ವಕವಾಗಿ ಆರಿಸಲಾಗಿದೆ. ನನ್ನ ಹೊರತು ಅವರಿಗೆ ಬೇರೆ ದೈವತವಿಲ್ಲ" ಎಂದು ಸಾಮ್ರಾಟನು ಜಂಭದಿಂದ ಹೇಳಿದ.

"ಕಳೆದ ಯುದ್ಧಾನಂತರ ಜರ್ಮನಿಯಲ್ಲಿ ಇಂಥ ಜನರು ಉಳಿದಿಲ್ಲ. ಕಳೆದ ಹತ್ತು ವರ್ಷಗಳಲ್ಲಿ ಕ್ರಾಂತಿಯ ಗಾಳಿಯು ಜನರಲ್ಲಿ ಬೀಸಹತ್ತಿದೆ.

ನಾವೀಗ ಪುನಃ ಸೈನ್ಯಸಿದ್ಧತೆ ನಡೆಸಿದರೆ ಜನರು ಕೆರಳುವರು. ಪ್ರಶಿಯಾದ ವಿರುದ್ಧ ಯಾವಾಗ ದಂಗೆಯೆದ್ದೇವೆಂದು ಜರ್ಮನಿಯ ಸಣ್ಣಪುಟ್ಟ ಸಂಸ್ಥಾನ ಗಳೆಲ್ಲ ದಾರಿ ಕಾಯುತ್ತಿವೆ. ಅವರು ಇನ್ನೆಂದಿಗೂ ನಮ್ಮ ಪರವಾಗಿ ಯುದ್ಧ ಮಾಡಲಾರರು. ಆದ್ದರಿಂದ ನಿಮಗಾಗಿ ತಮ್ಮ ಪ್ರಾಣವನ್ನಿರಿಸುವ ಉದಾರ ಜೀವಿಗಳು ಉಳಿದಿದ್ದಾರೆಂದು ಭಾವಿಸುವುದು ಸರಿಯಲ್ಲ "

"ಜರ್ಮನ ಸಿಂಹಾಸನವನ್ನು ಕಾಯ್ದುಕೊಳ್ಳಲು ಒಂದು ಕುಲದ ಅಗತ್ಯ ವಿದೆಂದು ಅರಿತ ನಿಮ್ಮ ಅಜ್ಜ ಮತ್ತು ಕಕ್ಕನು ಸೇರಿ ಪ್ರೊ. ವರ್ನರನ ಸಹಾಯ ದಿಂದ ಅಂಥದೊಂದು ಕುಲವನ್ನು ನಿರ್ಮಿಸಿದ್ದಾರೆ. ಸಾಮ್ರಾಟನ ರಕ್ಷಣೆ ಗಾಗಿ ಅಷ್ಟೇ ಅಲ್ಲ ಯುದ್ಧ ರಂಗಕ್ಕೆ ಧುಮುಕುವುದಕ್ಕೂ ಈ ಸಹಸ್ರಾವಧಿ ಜನರು ಸದಾ ಸಿದ್ಧರು "

" ಯಾರವರು ? ಈ ಅಜೇಯರು ಎಲ್ಲಿಯುವರು ?" ಎಂದು ಬೆರಗಾ ಗಿಯೆ ಕೇಳಿದ. ಆ ಸೇನಾಪತಿಗಳು ಅಲ್ಲಿ ಇಸ್ದಿಲ್ಲವಾದರೆ ತನ್ನ ತಂದೆಗೆ ಹುಚ್ಚು ಹಿಡಿದಿದೆ ಎಂದು ಅಂದುಕೊಳ್ಳುತ್ತಿದ್ದ.

" ಸಕಾಲಕ್ಕೆ ನಿನಗೆ ಎಲ್ಲವೂ ತಿಳಿಯುವುದು. ಮಾಗ್ಡೆಬರ್ಗದ ಸೈನಿಕ ವಿದ್ಯಾಪೀಠದ ಉದ್ಘಾಟನೆಗಾಗಿ ನಾನು ಹೋಗಬೇಕಾಗಿತ್ತು. ಆದರೆ ನಾನು ರಾಜಧಾನಿಯಲ್ಲಿ ಅಗತ್ಯವಾಗಿ ಉಳಿಯಬೇಕಾಗಿರುವುದರಿಂದ ನೀನೆ ಅಲ್ಲಿಗೆ ಹೋಗು. ರಾಜನಿಷ್ಠೆಯ ಇಂಥ ಪ್ರಸಂಗಗಳಿಗೆಲ್ಲ ನಾವು ಉತ್ತೇಜನ ಕೊಡ ಬೇಕು. ಅಲ್ಲದೆ ನಿನ್ನ ವಿವಾಹದ ಬಗ್ಗೆ ಕೂಡ ಜನರಲ್ಲಿ ಸಾಕಷ್ಟು ಉತ್ಕಂಠ ಹುಟ್ಟಬೇಕು- "

ಈ ಮದುವೆಯ ವಿಷಯವನ್ನು ಎತ್ತಿದೊಡನೆ ಅವನಿಗೆ ಕೋಪ ಬಂದಿತು. ಅಲ್ಲದೆ ಎಲ್ಸಾಳೊಡನೆ ತಾನು ಇನ್ನೂ ಇದೇ ಸಂಪರ್ಕ ಬೆಳೆಸಿ ಕೊಳ್ಳುತ್ತಿರುವಾಗ ತಮಗೆ ಒಮ್ಮೆಲೆ ಮಾಗ್ಡೆಬರ್ಗಕ್ಕೆ ಕಳಿಸುವದೆಂದರೆ—

" ನಾನೆಷ್ಟು ದಿನ ಹೋಗಬೇಕಾಗುವದು " ಎಂದು ಬಿಗಿದ.ಕೊಂಡೇ ಕೇಳಿದ

" ಮಾಗ್ಡೆಬರ್ಗದಲ್ಲಿ ಸೈನಿಕ ವಿದ್ಯಾಪೀಠದ ಉದ್ಘಾಟನೆಯನ್ನು ನಾಡದ್ದು ನಡೆಸಿ ಮುಂದೆ ಒಂದೆರಡು ದಿನ ಅಲ್ಲಿಯ ನಾಗರಿಕರು ನಿನ್ನ ಮದುವೆಯ

ನಿಮಿತ್ತ ನಿನಗೆ ಒಪ್ಪಿಸುವ ಕಾಣಿಕೆಗಳನ್ನು ಸ್ವೀಕರಿಸಿ ಬರುವ ವಾರದಲ್ಲಿ ನೀನು ಇಲ್ಲಿಗೆ ಹಿಂತಿರುಗಬಹುದು" ಎಂದು ಸಾಮ್ರಾಟನು ಕಾರ್ಯಕ್ರಮದ ಪಟ್ಟಿಯನ್ನು ನೋಡಿ ಹೇಳಿದ.

"ಒಳ್ಳೇದು ನಾನು ಹೋಗಲೇಬೇಕೆಂದು ತೋರುತ್ತದೆ." ಎಂದು ವಿಲಿಯಂನು ಗೊಣಗುಟ್ಟಿದ. ಇಡೀ ಒಂದು ವಾರ ಸಂಚಾರ, ಭಾಷಣ; ಮನ ರಂಜನೆಗೆ ಅವಕಾಶವೇ ಇಲ್ಲ.

"ವಿಲಿಯಂ, ಶೀಫ್ಲರನು ಬಂದಾಗ ನೀನು ಯಾರೊಡನೆ ಮಾತಾ ಡುತ್ತ ನಿಂತಿದ್ದಿ."

"ಎಲ್ಸಾ ಸೀಬರ್ಟಳೊಡನೆ. ಯಾಕೆ?" ಎಂದು ನಾಚಿಕೆಯಿಂದ ಕೆಂಪೇರಿದ ವಿಲಿಯಂ ಕೇಳಿದ.

"ಎಲ್ಸಾಳೊಡನೆ! ನಿನ್ನ ಅಭಿರುಚಿ ಉತ್ತಮವಾಗಿದೆ. ನಮ್ಮ ಅರಮನೆ ಯಲ್ಲಿಯೆ ಅವಳು ಅತ್ಯಂತ ಸುಂದರಿ. ಆದರೆ ವಿವಾಹವಾಗುವ ಮೊದಲೆ ಯಾವ ಸುದ್ದಿಗಳೂ ಹಬ್ಬಬಾರದಂತೆ ನೋಡಿಕೊಳ್ಳು. ನಂತರ ಬೇಕಾದರೆ ನಿನ್ನಿಚ್ಛೆಯಂತೆ ವರ್ತಿಸಬಹುದು."

"ನಿಮ್ಮ ಮಾತೇ ತಿಳಿಯುವದಿಲ್ಲ. ನನ್ನ ಸೋದರಿಯ ಸಂಗಾತಿ ಯೊಡನೆ ನಾಲ್ಕು ಮಾತನ್ನಾಡಿದರೆ ಯಾವ ಸುದ್ದಿ ಹಬ್ಬಬಹುದು." ಎಂದು ಇನ್ನಷ್ಟು ಬೆದರಿದವನಾಗಿ ಕೇಳಿದ.

"ಹಾಗಲ್ಲ. ಕಾಮಿನಿಗೆ ಮನಸೋಲುವ ಕುಲ ನಮ್ಮದು. ಆದರೆ ಈ ಸುದ್ದಿ ನಿನ್ನ ವಧುವಿಗೆ ತಿಳಿದರೆ ಸಾಕು. ಅವಳು ಲಗ್ನಕ್ಕೆ ಒಪ್ಪಲಿಕ್ಕಿಲ್ಲ; ಅಲ್ಲದೆ ಅವಳ ತಂದೆಯೂ ನೊಂದುಕೊಳ್ಳಬಹುದು. ಆದ್ದರಿಂದ ಈ ತೊಂದರೆ ತಪ್ಪಿಸಲು ಸ್ವಲ್ಪ ಜಾಗರೂಕನಾಗಿರು. ಇನ್ನು ಕೆಲ ವಾರಗಳಲ್ಲಿ ನಿನ್ನ ಮದುವೆಯಾದ ನಂತರ ನಿನ್ನಿಚ್ಛೆಯಂತೆ ವರ್ತಿಸಲು ನೀನು ಸ್ವತಂತ್ರನು." ಎಂದನು.

೫

ಅರ್ನಾಲ್ಡ ಹಾರ್ಟವೆಗನು ರೋಜೆಂಬರ್ಗದ ರಾಣಿಯ ಅರಮನೆಯ ದಿವಾನಖಾನೆಯನ್ನು ಪ್ರವೇಶಿಸಿದಾಗ ಮಧ್ಯಾಹ್ನ ಐದು ಗಂಟೆಯಾಗಿತ್ತು.

"ಎಷ್ಟು ತಡ ಮಾಡಿದಿ. ಕ್ಯಾಪ್ಟನ ಅರ್ನಾಲ್ಡ, ನೀನಿನ್ನು ಬರಲಿಕ್ಕಿಲ್ಲೆಂದೇ ಭಾವಿಸಿದ್ದೆವು" ಎಂದು ರೋಜೆಂಬರ್ಗದ ರಾಣಿಯು ಅವನನ್ನು ಸ್ವಾಗತಿಸಿದಳು.

"ಇದು ವರೆಗೆ ಬಿಡುವೇ ದೊರೆಯದ್ದರಿಂದ ನಾನು ಇಷ್ಟುಹೊತ್ತು ಇಂಥ ಸುರಮ್ಯ ಸಹವಾಸಕ್ಕೆ ಎರವಾಗಬೇಕಾಯಿತು." ಎಂದು ಪ್ರೀತಿಯಿಂದಲೆ ಉತ್ತರಿಸಿದ.

"ನಿಮ್ಮಂಥ ತರುಣ ಅಧಿಕಾರಿಗಳಿಗೂ ಇಷ್ಟೊಂದು ಕೆಲಸವಿರುವದೆಂದರೆ ನಾನೇನೂ ಒಪ್ಪುವದಿಲ್ಲ. ಬೇರೊಂದು ಮೋಹದ ವಸ್ತು ನಿನ್ನನ್ನು ಬಿಟ್ಟಿರಲಿಕ್ಕಿಲ್ಲ. ಆದರೆ ನೀನೀಗಬಂದಿರುವದರಿಂದ ನಾನು ಕ್ಷಮಿಸುತ್ತೇನೆ. ಹೆಡ್ವಿಗ, ಕ್ಯಾಪ್ಟನನನ್ನು ಕರೆದುಕೊಂಡುಹೋಗಿ ಚಹ ಕೊಡು." ಎಂದು ಅವಳು ತನ್ನ ಮಗಳಿಗೆ ಹೇಳಿದಳು.

"ಎಲ್ಲಿ ಹೋಗಿದ್ದಿರಿ. ನೀವು ಬೇಗನೆ ಬೇಗನೆ ಬರಬಹುದೆಂದು ಎಲ್ಸಾಳೂ ನಾನೂ ಬಹಳ ದಾರಿಕಾಯ್ದೆವು" ಎಂದು ಹೆಡ್ವಿಗಳು ಹೋಗ ಹೋಗುತ್ತ ಕೇಳಿದಳು.

ಕಳೆದ ಒಂದೆರಡು ವಾರಗಳಿಂದ ಹೆಡ್ವಿಗಳು ಅರ್ನಾಲ್ಡನನ್ನು ಅರಮನೆಯಲ್ಲಿ ಟೆನ್ನಿಸ ಆಡುವಾಗ, ಅಶ್ವಾರೋಹಣದ ನೆವದಿಂದ ಹೀಗೆ ದಿನಾಲೂ ಭೆಟ್ಟಿಯಾಗುತ್ತಿದ್ದಳು. ಅರ್ನಾಲ್ಡನ ಬಗ್ಗೆ ತನ್ನಲ್ಲಿ ಸ್ನೇಹ ಹುಟ್ಟಿದ್ದನ್ನು ಹೆಡ್ವಿಗಳು ಅರಿತುಕೊಂಡಿದ್ದಳು. ಎಲ್ಸಾಳ ಆಕರ್ಷಣೆ ಗೊಳಗಾದ ಅರ್ನಾಲ್ಡನು ದಿನಾಲೂ ತನ್ನನ್ನು ಭೆಟ್ಟಿಯಾಗದೆ ಮೋರೆ ತಪ್ಪಿಸುತ್ತಿರುವನೆಂದು ಅವಳಿಗೆನಿಸಿತು. ಆದರೆ ಎಲ್ಸಾಳ ವರ್ತನೆಯು ಅವಳಿಗರ್ಥವಾಗಲಿಲ್ಲ. ಒಮ್ಮೊಮ್ಮೆ ಅವಳು ಅರ್ನಾಲ್ಡನನ್ನು ಕಂಡೊಡನೆ ದೂರ ಓಡಿ ಹೋಗುತ್ತಿದ್ದರೆ ಮತ್ತೊಮ್ಮೆಗೆ ಇವಳೇ ಅರ್ನಾಲ್ಡನ ಪ್ರಾಣಪದಕ ಎಂದು ಹೆಡ್ವಿಗಳು ಆಣೆಯಿಟ್ಟು ಹೇಳುವಂತಿರುತ್ತಿತ್ತು. ಆದರೆ ಹೆಡ್ವಿಗಳನ್ನೂ ಎಲ್ಸಾಳ ವಿಶ್ವಾಸಕ್ಕೆ ಪಾತ್ರಳಾಗಿರಲಿಲ್ಲ. ಅರ್ನಾಲ್ಡನ ವಿಷಯವನ್ನು ಅವಳು ಎಲ್ಸಾಳೆದುರಿಗೆ ಎತ್ತಿದರೆ ಎಲ್ಸಾಳು ಕೂಡಲೇ ಜಾಣತನದಿಂದ ಆ ವಿಷಯವನ್ನು ಬದಲಿಸಿ ಬಿಡುತ್ತಿದ್ದಳು. ಅರ್ನಾಲ್ಡನೂ ಒಮ್ಮೊಮ್ಮೆ ಹೆಡ್ವಿಗಳನ್ನು ರೊಚ್ಚಿಗೆ

ಬ್ಬಿಸುತ್ತಿದ್ದನು.' ಎಲ್ಸಾಳಂಥ ಕಾಮಿನಿಯ ಚಿತ್ತಾಪಹರಣದ ರೀತಿಯನ್ನು ಅರಿಯದಿದ್ದ ಮೇಲೆ ಇಡೀ ಬರ್ಲಿನದಲ್ಲಿ ! ಸುಂದರನಾದ ತರುಣ ಅಧಿಕಾರಿಯಾಗಿಯೂ ಪ್ರಯೋಜನವೇನು ? ಆದರೆ ಅವನು ಅತ್ತ ಮನಸು ಹಾಕಿರಲಿಲ್ಲ.

ಅರ್ನಾಲ್ಡ ಮತ್ತು ಎಲ್ಸಾರು ಅತ್ಯಂತ ಅನುರೂಪ ದಂಪತಿಗಳು ಎಂದು ನಂಬಿದ್ದ ರೋಜೆಂಬರ್ಗದ ರಾಣಿಯು ಇಂದು ಅರ್ನಾಲ್ಡನು ಎಲ್ಸಾಳನ್ನು ಮಾತಾಡಿಸಲು ನಿನ್ನ ಅನುಮತಿ ಕೇಳಬಹುದು ಎಂದು ತನ್ನ ಮಗಳು ಹೆಡ್ವಿಗಳಿಗೆ ಹೇಳಿಟ್ಟಿದ್ದಳು. ಅರ್ನಾಲ್ಡನು ರಾಜಕುಟುಂಬದಲ್ಲಿ ಅತ್ಯಂತ ಪ್ರೀತಿಪಾತ್ರನಾಗಿದ್ದನು. ಅರ್ನಾಲ್ಡನ ತಂದೆ ಮೇಜರ ಹಾರ್ಟವೆಗನು ತುಂಬ ಸಿರಿವಂತನಾಗಿದ್ದನು. ಹೀಗೆ ಸರ್ವ ವಿಧದಲ್ಲಿಯೂ ಅನುಕೂಲ ದಾಂಪತ್ಯವಾಗಲಿರುವಾಗ ಎಲ್ಸಾಳ ಅನಾಸಕ್ತಿ, ಅರ್ನಾಲ್ಡನ ಮೌನಗಳನ್ನು ಕಂಡು ರೋಜೆಂಬರ್ಗದ ರಾಣಿಯ ಮಗಳಿಗೆ ಆಶ್ಚರಿಯಾಗಿತ್ತು. ಚಹದ ಮೇಜಿನ ಹತ್ತರ ನಿಂತು ಅವಳು ನಿಟ್ಟುಸಿರಿಟ್ಟಳು.

"ಏಕೆ ಹೆಡ್ವಿಗ, ಇಂದು ಮೌನದಿಂದಿರುವಿ ?" ಎಂದು ಅರ್ನಾಲ್ಡನು ಕೇಳಿದ.

"ಎಲ್ಸಾಳ ವಿಚಾರದಲ್ಲಿದ್ದೆ" ಎಂದು ಮುನಸಿನಿಂದಲೇ ಹೇಳಿದಳು.

" ನೀನಿಷ್ಟು ವ್ಯಸನಪಡಬೇಕಾದರೆ ಆ ನಿನ್ನ ಸುಂದರ ಗೆಳತಿಗೆ ಏನಾದರೂ ಅಪಾಯವಾಗಿದೆಯೊ ? "

" ಏನೂ ಇಲ್ಲ, ಅವಳು ನೆಮ್ಮದಿಯಿಂದಿದ್ದಾಳೆಯೆ ಎಂದು ಆಲೋಚಿಸುತ್ತಿದೆ."

" ಅವಳ ಮುಖ ಲಕ್ಷಣವನ್ನು ನಂಬುವದಾದರೆ ತೀರ ಸುಖದಿಂದಲೇ ಇದ್ದಾಳೆ ಅವಳು. ಅಗೋ ಬರುತ್ತಿದ್ದಾಳೆ, ನೀನೇ ಕಂಡುಕೊಳ್ಳಬಹುದು."

**ಕೆಲವು ತರುಣ ಅಧಿಕಾರಿಗಳೊಡನೆ ಎಲ್ಸಾಳು ಬರುತ್ತಿರುವದನ್ನು ಹೆಡ್ವಿಗಳು ಕಂಡಳು. ವಿನೋದಮನಸ್ಕರಾದ ಅವರು ಅರ್ನಾಲ್ಡನು ನಿಂತಲ್ಲಿಗೆ ಬಂದ ಕೂಡಲೆ ಅವನ ಜತೆಯಲ್ಲಿ ಹೆಡ್ವಿಗಳನ್ನು ಕಂಡ ಎಲ್ಸಾಳ ಮುಖ**

ಭಾವವು ಒಮ್ಮೆಲೆ ಬದಲಿಸಿತು. ಮುಗುಳ್ನಗೆ ಅಳಿಸಿಹೋಗಿ ಗಾಂಭೀರ್ಯವು ನೆಲಸಿತು. ಈ ಬದಲಾವಣೆಯನ್ನು ಕಂಡ ಅರ್ನಾಲ್ಡನ ಕಣ್ಣುಗಳಲ್ಲಿ ತುಂಟ ನಗೆಯೊಂದು ಮಿಂಚಿ ಹೋಯಿತು.

"ಇಷ್ಟೊತ್ತು ಎಲ್ಲಿ ಹೋಗಿದ್ದಿ ! ಚಹ ಆರಿ ತಣ್ಣಗಾಯಿತು. ನಿನ್ನ ಪ್ರೀತಿಯ ಕೇಕುಗಳನ್ನೆಲ್ಲ ಕ್ಯಾಪ್ಟನ ಅರ್ನಾಲ್ಡನು ತಿಂದು ತೀರಿಸಿದ "ಎಂದು ಹೆಡ್ವಿಗಳು ಸಂಭ್ರಮದಿಂದ ತನ್ನ ಗೆಳತಿಯನ್ನು ಸ್ವಾಗತಿಸಿದಳು.

"ಏನೂ ಚಿಂತೆಯಿಲ್ಲ, ಇಷ್ಟು ಹೊತ್ತು ಪಂದ್ಯಾಟಕ್ಕಾಗಿ ಟೆನ್ನಿಸಿನ ಆಟ ಆಡುತ್ತಿದೆವು. ನನಗೆ ತಂಪು ಕಾಫಿ ಸಿಕ್ಕ ಸಾಕು ! ನಿನ್ನ ಚಹ ನಿನ ಗಿರಲಿ, ಅರ್ನಾಲ್ಡನು ಬೇಕಾದರೆ ಕೇಕುಗಳನ್ನು ತೀರಿಸಲಿ " ಎಂದು ಸೆಡವಿನಿಂದಲೆ ನುಡಿದಳು.

"ಅವು ನಿನ್ನ ಪ್ರೀತಿಯ ಕೇಕುಗಳೆಂದು ತಿಳಿ-" ಎಂದು ಅರ್ನಾಲ್ಡನು ಅಣಕದಿಂದ ನುಡಿಯುತ್ತಿರುವಷ್ಟರಲ್ಲಿ ಅವನ ದಳದ ಮೇಜರನು ಬಂದು ಅವನನ್ನು ತಡೆದು

"ನೀನೂ ಟೆನ್ನಿಸಿನ ಆಟಕ್ಕೆ ಬಂದಿದ್ದರೆ ನಮಗೆ ಸಾಕಷ್ಟು ಅನುಭವ ದೊರೆಯುತ್ತಿತ್ತು " ಎಂದನು.

"ಸಾಧ್ಯವಿರಲಿಲ್ಲ ಮೇಜರ. ಅಲ್ಲದೆ ಆ ಪಂದ್ಯಾಟಗಳಲ್ಲಿ ಭಾಗವಹಿಸುವ ಇಚ್ಛೆಯೂ ನನಗಿಲ್ಲ. ಆ ಹೊತ್ತಿಗೆ ನಾನು ಇಲ್ಲಿ ಇರಲಿಕ್ಕೂ ಸಾಧ್ಯವಾಗಲಿಕ್ಕಿಲ್ಲ."

"ಏಕೆ? ಎಲ್ಲಿಗೆ ಹೋಗುವಿ? ಒಂದೂ ಪಂದ್ಯಾಟವನ್ನು ತಪ್ಪಿಸಿಕೊಂಡವನಲ್ಲ" ಎಂದರೂ ಪ್ರಶ್ನೆಗಳ ಸುರಿಮಳೆ ನಡೆಸಿದರು.

"ಓ, ನಿಮ್ಮ ಉತ್ಕಂಠತೆಯನ್ನು ನಾನು ಶಮಿಸಲಾರೆ. ಆದರೆ ಪಂದ್ಯಾಟದಲ್ಲಿ ಭಾಗವಹಿಸುವದಕ್ಕಾಗದು ಎಂದು ಮಾತ್ರ ಹೇಳಬಲ್ಲೆ" ಎಂದು ನಗುತ್ತಲೆ ಉತ್ತರಿಸಿದ.

ಎಲ್ಲರ ಮುಖದ ಮೇಲೆ ನಿರಾಶೆ ಮೂಡಿತು.

" ನೀನು ಉತ್ತಮ ಆಟಗಾರ, ಪಂದ್ಯಾಟದಲ್ಲಿ ಆಸ್ಟ್ರೇಲಿಯಾದ ಆ ಆಟಗಾರರನ್ನು ಸೋಲಿಸುವವರು ಯಾರು ಇಲ್ಲ. " ಎಂದು ಹಾನ್ಸವೆುಸ್ಸಿಂಗನು ಹೇಳಿದನು.

ಅಲ್ಲಿದ್ದ ಎಲ್ಲರೂ ಈ ಹೇಳಿಕೆಗೆ ಹೂಂಗುಟ್ಟಿದರು. ಬರಿ ಟೆನ್ನಿಸ ಒಂದರಲ್ಲಿಯೇ ಏಕೆ, ಯಾವ ಆಟದಲ್ಲಿಯೂ ಅರ್ನಾಲ್ಡನನ್ನು ಸರಿಗಟ್ಟುವವರು ಬರ್ಲಿನದಲ್ಲಿಲ್ಲವೆಂಬುದು ಎಲ್ಸಾಳಿಗೆ ಖಂಡಿತವಾಗಿತ್ತು. ಅವಳು ಭೀಮಕಾಯದ ಅರ್ನಾಲ್ಡನ ಬಳಿ ನಿಂತಿದ್ದ ಇತರ ಅಧಿಕಾರಿಗಳನ್ನು ನೀರಿಕ್ಷಿಸಿದಳು. ಯುದ್ಧೋಧ್ವಸ್ತ ಯುರೋಪದ ಬರಗಾಲದ ಮೂರ್ತಿಗಳಂತೆ ಅವರು ತೆಳ್ಳಗೆ ಬೆಳ್ಳಗೆ ಇದ್ದರು.

ಅರ್ನಾಲ್ಡನು ಚಿಕ್ಕವನಿದ್ದಾಗಲೂ ಶಕ್ತಿಸಂಪನ್ನನಾದ್ದ ! ಅವಳ ಮುಖವು ನಾಚಿಕೆಯಿಂದ ಕೆಂಪೇರಿತು. ತನ್ನ ಅಂತಃರ್ಭಾವಗಳನ್ನು ಹೀಗೆ ವ್ಯಕ್ತಪಡಿಸುವಷ್ಟು ತಾನು ನೈವಃರೆತದ್ದು ಹೇಗೆಂಬುದು ಅವಳಿಗೇ ತಿಳಿಯಲಿಲ್ಲ. ಅರ್ನಾಲ್ಡನು ಇತರರೊಡನೆ ಮಾತಾಡುತ್ತಿದ್ದರೂ ತನ್ನನ್ನೇ ನೋಡುತ್ತಿದ್ದಂತೆ ಅವಳಿಗೆ ಕಂಡುಬಂತು. ಅವಳಿಗೆ ಚಿರಪರಿಚಿತವಾದ ಅನಾಸಕ್ತ ಮಂದಸ್ಮಿತವನ್ನು ಬೀರಿದ್ದ. ತನ್ನ ಮನದಾಶೆ ಅವನಿಗೆ ತಿಳಿಯಿತೆ ? ಈ ವಿಚಾರ ಸುಳಿದೊಡನೆ ಅವಳು ಪುನಃ ನಾಚಿ ತಲೆಬಾಗಿದಳು. ಮರುಕ್ಷಣದಲ್ಲಿಯೇ ಅವಳು ಅಜ್ಞಾತ ಭಾವಪ್ರೇರಿತಳಾಗಿ ಅರ್ನಾಲ್ಡನನ್ನು ದಿಟ್ಟಿಸಿ ಮುಗುಳ್ನಗೆ ಬೀರಿದಳು.

" ನೀನು ಇಲ್ಲಿ ಉಳಿಯುವಂತೆ ನಾವು ನಿನ್ನ ಮನವೊಲಿಸಲಾರೆವೆ? " ಎಂದು ಎಲ್ಸಾ ಮೃದುಮಧುರವಾಗಿ ಕೇಳಿದಳು. ಹೆಡ್ವಿಗಳು ಆಶ್ಚರಿಯಿಂದ ಎಲ್ಸಾಳನ್ನು ನೋಡಿದಳು.

" ನಾನಿರಬೇಕೆಂದು ನಿನ್ನ ಅಪೇಕ್ಷೆಯೆ ? " ಎಂದು ಅರ್ನಾಲ್ಡನು ಒಂದು ಹೆಜ್ಜೆ ಅವಳ ಸಮೀಪಕ್ಕೆ ಸರಿದ. ಕ್ಷಣಹೊತ್ತು ಅವರಿಬ್ಬರೂ ತಾವೇ ತಾವಾಗಿದ್ದರು. ಸುತ್ತಲಿನ ಜನರನ್ನು ಮರೆತೇಬಿಟ್ಟಿದ್ದರು. ತನ್ನ ಹಿಂದಿನ ಅಪರಾಧಗಳನ್ನೆಲ್ಲ ಎಲ್ಸಾ ಕ್ಷಮಿಸಿ ಬಿಟ್ಟಿದ್ದಾಳೆಂದು ಅರ್ನಾಲ್ಡನಿಗೆ ಆಗ ತೋರಿತು. ತಾನು ಅವನಿಗೆ ಸೋತು ಹೋದದ್ದೇ

ನಿಜ, ಈಗ ಅವನು ಬಯಸಿದರೆ ಪುನಃ ತನ್ನ ಒಡಲನ್ನು ಅವನಿಗೆ ಒಪ್ಪಿಸಿ ಬಿಡಬಲ್ಲೆ ಎಂಬುದೊಂದೆ ಭಾವನೆ ಎಲ್ಸಾಳಲ್ಲಿ ಮೂಡಿತ್ತು. ಬಾಲ್ಯದ ನೆನಹುಗಳು ಒಂದೊಂದಾಗಿ ಅವಳಲ್ಲಿ ಸುಳಿಯುತ್ತಿದ್ದವು.

"ಹೌದು, ನೀನು ಇದೇಕೆಂದು ನಾನು ಬಯಸುತ್ತೇನೆ" ಎಂದು ಇಸಿದಾಗಿ ನುಡಿದವಳೇ ಹೆಡ್ವಿಗಳನ್ನು ಕರೆದುಕೊಂಡು ಅಲ್ಲಿಂದ ಜಾಣ ತನದಿಂದ ಜಾರಿದಳು.

ಅರ್ನಾಲ್ಡನ ಮುಖದ ಮೇಲೆ ಗೆಲುವಿನ ನಗೆ ತೋರಿತು. ಏಕೋ ಏನೋ, ಅವನು ತನ್ನ ಕೈ ಮೇಲಿನ ಹಲ್ಲಿನ ಗುರುತುಗಳನ್ನು ನೋಡಿ ಕೊಂಡ.

"ಅಂ, ಅರ್ನಾಲ್ಡ! ಎಲ್ಸಾ ಸೀಬರ್ಟಳೊಡನೆ ಪ್ರಣಯಚೇಷ್ಟೆ ನಡೆಸಿದ್ದೆಯಾ? ನೀವು ತರುಣರು ದೈವಶಾಲಿಗಳೊ!" ಎಂದು ಐವತ್ತು ವರ್ಷದ ಮೇಜರನು ನುಡಿದ.

"ಹಾಗೇನಿಲ್ಲ ಮೇಜರ, ನಾವಿಬ್ಬರೂ ಚಿಕ್ಕಂದಿನ ಗೆಳೆಯರು."

ಎಲ್ಸಾಳೊಡನೆ ಅರ್ನಾಲ್ಡನು ಸಂಬಂಧವನ್ನು ಹೆಚ್ಚಿಸಿಕೊಳ್ಳಬಾರದೆಂದು ಬಯಸುತ್ತಿದ್ದ ಮೇಜರನು ಒಂದು ಸೂಕ್ಷ್ಮ ಪ್ರಶ್ನೆಯನ್ನು ಹಾಕಿದ.

"ಎಲ್ಸಾಳು ಲೆಫ್ಟನಂಟ ಹ್ಯಾನ್ಸಮೆಸ್ಸಿಂಗಳನ್ನು ಮದುವೆಯಾಗುತ್ತಾಳಂತೆ"

"ನಿಮಗೆಲ್ಲೊ ಸುಳ್ಳು ಸುದ್ದಿ ತಿಳಿದಿರಬೇಕು. ಹಾಗೇನೂ ಅವಳ ಇಚ್ಛೆಯಿಲ್ಲೆಂದು ನನಗೆ ತಿಳಿದಿದೆ" ಎಂದು ಅರ್ನಾಲ್ಡನು ನಿರ್ವಿಕಾರದಿಂದ ಉತ್ತರಿಸಿದ.

"ಅದೂ ನಿಜವಿರಬಹುದು. ಆದರೆ ಎಲ್ಸಾಳು ಏಕಾಕಿನಿಯಾಗಿರದಷ್ಟು ಸುಂದರಿಯಾಗಿದ್ದಾಳೆ. ಅವಳು ಒಬ್ಬ ಶ್ರೀಮಂತನನ್ನು ಬಲೆಗೆ ಹಾಕಿಕೊಂಡಿದ್ದಾಳೆ. ಅವನು--" ಎಂದು ಮೇಜರನು ಮೂದಲಿಕೆಯ ರೀತಿಯಲ್ಲಿ ಆಡಿದ.

"ಅದು ಸರಿ ಮೇಜರ. ಅವನ್ಯಾರೆಂಬುದು ತಿಳಿದರೆ—" ಎಂದು ಅರ್ನಾಲ್ಡನು ಅವಡುಗಚ್ಚಿ ನುಡಿದ.

"ಬರ್ಲಿನ್ನದಲ್ಲಿಯ ಇತ್ತೀಚಿನ ವಾರ್ತೆ ನಿನಗೆ ಹೇಗೆ ತಿಳಿದಿಲ್ಲ ? ನೀನೇನು ಕಣ್ಣುಮುಚ್ಚಿಕೊಂಡು ಕುಳಿತಿರುವಿಯಾ ? ನಾನು ಹೆಚ್ಚಿಗೇನೂ ಹೇಳಬೇಕಾಗಿಲ್ಲ. ಅಲ್ಲಿ ನೋಡು" ಎಂದು ಮೇಜರನು ಗಹಗಹಿಸಿ ನಗ ತೊಡಗಿದ.

ಅದೇ ಕೋಣೆಯನ್ನು ಪ್ರವೇಶಿಸಿದ ಸುಂದರ ತರುಣನೊಬ್ಬನು ಸುತ್ತಲೂ ದಿಟ್ಟಿ ಚಲ್ಲಿ ಎಲ್ಸಾಳಿದ್ದಲ್ಲಿಗೆ ಹೋಗಿ "ಓ, ಎಲ್ಸಾ, ನೀನಿಂದು ಬಹಳ ಚನ್ನಾಗಿ ಟೆನಿಸ ಆಡಿದೆ" ಎಂದು ಅವಳ ಹಸ್ತವನ್ನು ಚುಂಬಿಸಿದ.

"ಅಂ, ರಾಜಕುಮಾರ" ಎಂದು ಅರ್ನಾಲ್ಡನು ತುಟಿಕಚ್ಚಿ ನುಡಿದ.

೬

"ಆ ಹೆಂಗಸು ಒಪ್ಪಿಸಿದ ವರದಿಯಿದು ಪ್ರಭು" ಎಂದು ಸ್ಮಿಟನು ತನ್ನೆದುರು ಕುಳಿತಿದ್ದ ರಾಜಕುಮಾರ ಈಟಲ ಫ್ರೆಡರಿಕನಿಗೆ ಹೇಳಿದನು. ಅವರೊಂದಿಗೆ ಬ್ರಿನ್ ಮತ್ತು ಪ್ಲೊಯಿಜರೂ ಇದ್ದರು. ಆ ಹೆಂಗಸು ತನ್ನ ಕತೆಯನ್ನು ಹೇಳಿದ ಉಪಹಾರ ಗೃಹದಲ್ಲಿಯೇ ಅವರು ಈಗ ಇದ್ದರು. ಆದರೆ ಇಂದು ಆ ಹೆಣ್ಣುಮಗಳು ಮಾತ್ರ ಇರಲಿಲ್ಲ.

"ಹಂ, ವರ್ನರನ ವರ್ಣನೆಯನ್ನು ಸರಿಹೋಲುವ ಒಬ್ಬನು ಅವಳ ಆ ಬಾಲಕನನ್ನು ಐದು ವರ್ಷದವನಿದ್ದಾಗ ಒಂದು ಸೈನಿಕ ಕಾಲೇಜಿಗೆ ಕರೆದೊಯ್ದನೆಂದಿಷ್ಟೆ ಅಧಿಕಾರಿಗಳು ಅವಳಿಗೆ ಹೇಳಿದರೆ ? ಅವರ ಹೇಳಿಕೆ ಯಂತೆ ಅವಳು ಲೀಪಝಿಗಕ್ಕೆ ಹೋಗಿ ಹುಡುಗನನ್ನು ಶೋಧಿಸಲು ಪ್ರಯತ್ನಿಸಿದಳು. ಆದರೆ ಅವನ ಸುಳಿವು ಹತ್ತಲಿಲ್ಲ. ನಾವೀಗ ಲಿಪಝಿಗ ದಲ್ಲಿ ನಮ್ಮ ವಿಚಾರಣೆಯನ್ನು ಮುಂದರಿಸಬೇಕು. ಒಬ್ಬ ಹುಡುಗನನ್ನು ಅಲ್ಲಿ ಒಯ್ದಿರುವರೆಂದ ಮೇಲೆ ಅವನ ಜತೆಯಲ್ಲಿ ಇನ್ನೂ ಅನೇಕ ಹುಡುಗ ರಿದ್ದಿರಬೇಕು. ಒಳ್ಳೇದು, ಸ್ಮಿಟ ಹಾರಬರ್ಗದಲ್ಲಿ ನಿನಗೇನು ಕಂಡು ಬಂತು ?"

ಸ್ಮಿಟನು ಕಿಸೆಯಲ್ಲಿಯ ಹಾಳೆಗಳನ್ನು ತೆಗೆದು ಹೇಳತೊಡಗಿದ—

“ ವರ್ನರನು ೧೯೧೫ ರಲ್ಲಿ ಹಾರಬರ್ಗಕ್ಕೆ ಬಂದನು. ನಗರದ ಹೊರಗೆ ಒಂದು ಪ್ರಶಸ್ತವಾದ ಬಂಗಲೆಯನ್ನು ಹಿಡಿದು ತನ್ನ ಸಹಾಯಕ ಮುಲ್ಲರ ಮತ್ತು ಇಬ್ಬರು ಸೇವಕರೊಡನೆ ಇರಹತ್ತಿದ. ಯಾವಾಗಾದ ರೊಮ್ಮೆ ತನ್ನ ಕಾರಿನಲ್ಲಿಂದ ಊರೊಳಗೆ ಬಂದಾಗಷ್ಟೆ ಜನರಿಗೆ ಅವನ ದರ್ಶನ. ಇಲ್ಲದಿದ್ದರೆ ಅವನು ಜನರ ಕಣ್ಣಿಗೆ ಬೀಳುತ್ತಿರಲಿಲ್ಲ. ಕೆಲ ದಿನಗಳ ನಂತರ ಮೇಜರ ಹಾರ್ಟವೆಗನು ಒಬ್ಬ ಹೆಣ್ಣುಮಕ್ಕಳನ್ನು ಕರೆದು ಕೊಂಡು ಅಲ್ಲಿಗೆ ಬಂದದ್ದರಿಂದ ನಗರದವರಿಗೆಲ್ಲ ಆಚ್ಚರಿಯಾಯಿತು. ಮೇಜರನು ಹಾರಬರ್ಗಕ್ಕೆ ಪದೇಪದೇ ಭೆಟ್ಟಿ ಕೊಡುತ್ತಿದ್ದರೂ ಹೆಣ್ಣು ಮಗಳು ಬಂಗಲೆ ಬಿಟ್ಟು ಹೊರಬೀಳುತ್ತಿರಲಿಲ್ಲ. ಕೆಲವು ದಿನ ಜನರು ವರ್ನರನ ಗೊಡವೆ ಬಿಟ್ಟು ಈ ಹೊಸಬಿಯ ಬಗ್ಗೆ ಆಡಿಕೊಳ್ಳುತ್ತಿದ್ದರು. ಆ ಹೆಣ್ಣುಮಗಳು ಆಗಾಗ ವರ್ನರನೊಡನೆ ಮನೆಯ ಮುಂದಿನ ಅಂಗಳ ದಲ್ಲಿ ತಿರುಗಾಡುತ್ತಿದ್ದುದು ಕಂಡು ಬರುತ್ತಿತ್ತು. ಅವಳು ಸುರಸುಂದರಿ ಯಾಗಿದ್ದಳೆಂದು ಅವಳನ್ನು ಕಂಡವರು ಹೇಳುತ್ತಿದ್ದರು. ಅವಳು ಗಂಡು ಕೂಸನ್ನು ಹೆತ್ತು ಸತ್ತುಹೋದಳು ಎಂಬ ಸುದ್ದಿ ಒಂದು ದಿನ ಹಬ್ಬಿತು. ಅವಳ ಕಳೇಬರವನ್ನು ಹಾರಬರ್ಗದಲ್ಲಿ ಸ್ಮಶಾನಭೂಮಿಯಲ್ಲಿ ಹುಗಿ ಯಾಲಾದ್ದರಿಂದ ಈ ಸುದ್ದಿ ನಿಜವೆಂದು ನಂಬಿದರು. ನಂತರ ಮೇಜರ ಹಾರ್ಟವೆಗನು ಆ ಕೂಸನ್ನೂ ಒಬ್ಬ ದಾಯಿಯನ್ನೂ ಕರೆದುಕೊಂಡು ಅಲ್ಲಿಂದ ಹೊರಟು ಹೋದ. ಪ್ರೊ. ವರ್ನರನು ಮಾತ್ರ, ಈಗ ಐದು ವರ್ಷ ಪೂರ್ವ ದಲ್ಲಿ ಸಾಯುವವರೆಗೂ, ಅಲ್ಲಿಯೆ ಹಾರಬರ್ಗದ ಆ ಮನೆಯಲ್ಲಿದ್ದ. ಅಲ್ಲಿ ನನಗೆ ತಿಳಿದದ್ದು ಇಷ್ಟೇ, ಪ್ರಭು ”

“ನಾನೆಣಿಸಿದಕ್ಕಿಂತ ನೀನು ಹೆಚ್ಚು ಯಶಸ್ವಿಯಾಗಿರುವಿ. ನಿನ್ನ ಮಹ ತ್ವದ ಸಂಗತಿಗಳನ್ನು ಕಂಡು ಹಿಡಿದಿದ್ದೀ. ಅರ್ನಾಲ್ಡನ ತಂದೆಯೂ ಇದರಲ್ಲಿ ಸೇರಿದ್ದು ವಿಚಿತ್ರ. ಆ ಹುಡುಗನ ಗತಿಯೇನಾಯಿತೊ ? ” ಎಂದು ನುಡಿದು ಒಂದು ನಿಮಿಷ ಮೌನವಾಗಿದ್ದು ನಂತರ ಗಹಗಹಿಸಿ ನಗಲಾರಂಭಿ ಸಿದ. ಸ್ಮಿಟನು ಮಿಕಿಮಿಕಿ ಅವನನ್ನೇ ನೋಡಹತ್ತಿದ. ರಾಜಕುಮಾರನು ಈ ರೀತಿ ವರ್ತಿಸುವದು ವಿರಳವಾಗಿತ್ತು.

"ಪ್ರಭೂ......" ಎಂದು ಸ್ಮಿಟನು ಪ್ರಾರಂಭಿಸಿದ.

"ಸ್ಮಿಟ್, ನನ್ನ ವಿನೋದ ನಿನಗೆ ತಿಳಿಯಲಿಲ್ಲವೆ?" ಎಂದು ಪುನಃ ಕಿಲಕಿಲನೆ ನಕ್ಕ.

"ಯಾವ ವಿನೋದ ಪ್ರಭು!" ಎಂದು ಸ್ಮಿಟನು ನರಗುಂದಿದವನಾಗಿ ಕೇಳಿದ. ರಾಜಕುಮಾರನಿಗೆ ಹುಚ್ಚು ಹಿಡಿದೆದೆಂದೇ ಅವನ ಭಾವನೆಯಾಗ ಹತ್ತಿತು.

"ಪೆದ್ದ, ಇನ್ನೂ ತಿಳಿಯಲಿಲ್ಲವೇ? ಅಧಿಕಾರಿಗಳಲ್ಲಿ ಅತ್ಯಂತ ಚಲು ವನಾದ ಬರ್ಲಿನದ ಪ್ರೀತಿ ಪಾತ್ರನಾದ ಯುವರಾಜನ ಸ್ನೇಹಿತ ಅರ್ನಾಲ್ಡ ಹಾರ್ಟವೆಗನು ವರ್ನರನ ಪ್ರಯೋಗಜನ್ಯಜೀವಿ. ಇದು ಅದ್ಭುತವಾದ ಸಂಗತಿ." ಎಂದು ಮತ್ತೆ ಅಟ್ಟಹಾಸಗೈದನು.

ಸ್ಮಿಟನು ಒಂದು ಕ್ಷಣ ರಾಜಕುಮಾರ ಈಟೆಲನ ಮುಖವನ್ನು ಅಚ್ಚರಿ ಯಿಂದ ನೋಡಿದನು. ತನಗೆ ತಿಳಿದಿದ್ದ ಸಂಗತಿಗಳನ್ನು ಒಂದೊಂದಾಗಿ ಹೆಣೆಯಹತ್ತಿದನು. ಅರ್ನಾಲ್ಡನ ಭೀಮಕಾಯ, ಅವನ ತೈಲಬುದ್ಧಿ, ಸ್ತ್ರೀಯರು ನಡೆಸುತ್ತಿದ್ದ ಮುಖಸ್ತುತಿಯಲ್ಲಿ ಅನಾಸ್ಥೆ, ಅವನ ಅನೇಕ ಕ್ರೌರ್ಯದ ಕತೆಗಳು ಇವೆಲ್ಲವುಗಳನ್ನು ಗಮನಿಸಿದರೆ ವರ್ನರನ ಪ್ರಯೋಗದಿಂದ ಇಂಥ ಜೀವಿಗಳನ್ನು ನಿರ್ಮಿಸುವ ಪ್ರಯತ್ನ ನಡೆತಿತ್ತೆಂದು ನಂಬಬಹುದು. ಅಷ್ಟರಲ್ಲಿ ಸ್ಮಿಟನಿಗೆ ಇನ್ನೊಂದು ವಿಚಾರವು ಹೊಳೆಯಿತು.

"ಅರ್ನಾಲ್ಡನು ವರ್ನರನ ಪ್ರಯೋಗಜನ್ಯ ಮಾನವನಾಗಿದ್ದರೆ ನಮ್ಮ ಸಾಮ್ರಾಟರಿಗೆ ಅದು ತಿಳಿದಿರಬೇಕು. ಅವರಿಗೆ ಗೊತ್ತಿದ್ದರೆ ಅವನನ್ನು ಈ ಉನ್ನತಸ್ಥಾನಕ್ಕೆ ಏರಿಸಿದ್ದಾದರೂ ಹೇಗೆ? ಇದರ ಗೂಢವೇನಿರಹುದು? ತನ್ನ ಮಗನ ಸ್ನೇಹಿತನಾಗಲೂ ಅವನಿಗೆ ಅವಕಾಶ ಕೊಡುವ ಇದರಲ್ಲಿ ಏನೋ ಗೂಢವಿದ್ದಿರಬೇಕು."

"ಸ್ಮಿಟ, ನೀನು ಹೇಳಿದ್ದು ಸರಿ! ನೀನಂದಂತೆ ಸಾಮ್ರಾಟರಿಗೆ ಇದು ತಿಳಿದಿರಲಿಬೇಕು. ಅರ್ನಾಲ್ಡನನ್ನು ತನ್ನ ಬೆಂಗಾವಲಿಗೆ ಇಟ್ಟುಕೊಳ್ಳುವಲ್ಲಿ ಕಾರಣ ಏನಿರಬೇಕು?" ಎಂದು ಈಟೆಲನು ಗಂಭೀರನಾಗಿಯೇ ನುಡಿದ.

"ಏನೋ ಒಂದು ಮಹತ್ವದ ಧ್ಯೇಯಸಾಧನೆಗಾಗಿ ಇರಬಹುದು. ಇರಲಿ, ಆನ್ರಾಗಲ್ಡನಿಗಾದರೂ ಈ ಸುದ್ದಿ ಗೊತ್ತಿದೆಯೆ?"

"ಏನು, ಅವನಿಗೆ? ಎಂದಿಗೂ ಶಕ್ಯವಿಲ್ಲ. ಅವನು ಇತರರೊಡನೆ ವರ್ತಿಸುವ ರೀತಿಯನ್ನು ಕಂಡಿಲ್ಲವೆ? ಒಮ್ಮೊಮ್ಮೆಯಂತೂ ಉನ್ಮತ್ತನಂತೆ ಮೆರೆಯುತ್ತಾನೆ. ಮೋಜರ ಹಾರ್ಟವೆಗನ ಔರಸ ಪುತ್ರನೇ ತಾನು, ಅವನ ಅವನ ಆಸ್ತಿಪಾಸಿಗಳೆಲ್ಲ ತನ್ನವು ಎಂದೇ ಭಾವಿಸಿದ್ದಾನೆ. ಅವನಿಗೆ ಈ ಸಂಗತಿ ಗೊತ್ತಿದೆಂದು ನಾನೇನೂ ಭಾವಿಸುವದಿಲ್ಲ."

"ವರ್ನರನ ಪ್ರಯೋಗದಿಂದ ತಾನು ಹುಟ್ಟಿದವ, ಈ ಜಗತ್ತಿನಲ್ಲಿ ತನ್ನವರೆಂಬುವರು ಯಾರೂ ಇಲ್ಲ, ಸಾಮ್ರಾಟರ ಸಂತೋಷಕ್ಕಾಗಿ ತನ್ನ ಜೀವನವಿದೆಂದು ಅವನಿಗೆ ಗೊತ್ತಾದರೆ ಅವನಿಗೆ ಏನೆನಿಸಬಹುದು."

"ಇದರ ಪರಿಣಾಮವೇನಾಗುವದೊ ಸುಲಭವಾಗಿ ಊಹಿಸಲಿಕ್ಕೆ ಬಾರದು ಸದ್ಯಕ್ಕಂತೂ ಅವನು ರಾಜನಿಷ್ಠನಾಗಿದ್ದಾನೆ; ಯುವರಾಜನ ಸ್ನೇಹಿತನಾಗಿದ್ದಾನೆ."

"ಅವನ ಔದ್ಧತ್ಯಕ್ಕನುಗುಣವಾಗಿ ರಾಜನಿಷ್ಠನಾಗಿದ್ದಾನೆ. ಅವನಿಗೆ ಇದುವರೆಗೆ ಎಲ್ಲಿಯೂ ಯಾವ ವಿಷಯದಲ್ಲಿಯೂ ನಿರಾಶೆ ಆಗಿಲ್ಲ. ಒಮ್ಮೆ ಅವನ ಮನೋಭಂಗವಾಗಿ ತಾನು ಹೆರವರ ಆಟಿಗೆಯ ವಸ್ತು ಎಂಬ ಭಾವನೆ ಅವನಲ್ಲಿ ಮಿಂಚಿದಲ್ಲಿ ನಾವು ಬೇರೆ ಕತೆಯನ್ನೇ ಕೇಳಬೇಕಾದೀತು."

"ಹೌದು, ಆದರೆ ಅದನ್ನು ಹೇಗೆ ಸಾಧಿಸಬೇಕು? ಸಾಮ್ರಾಟರ ಅನುಗ್ರಹವಿರುವ ವರೆಗೆ ಅವನಿಗೆ ಆ ಸ್ವರ್ಗಸುಖ ತಪ್ಪುವದಿಲ್ಲ. ಯಾವ ನೊಬ್ಬ ಸಾಮಾನ್ಯನಾಗಿದ್ದರೆ ಆ ಮಾತು ಬೇರೆ! ಈಗ ವರ್ನರನ ಪ್ರಯೋಗ ಜಾತನೊಡನೆ ಸಂಬಂಧ."

"ಅದು ನಿಜ ಪ್ರಭು. ಅವರು ಪ್ರಾಣಿಗಳಿಗಿಂತ ಬೇರೆ ಏನೂ ಇಲ್ಲ. ಅಧಮ ಭಾವನೆಗಳು ಅವರಲ್ಲಿ ಸುಪ್ತವಾಗಿರಲೇಬೇಕು. ನಾವು ಅವನ್ನು ಹೊಡೆಹೆಬ್ಬಿಸಲಿಕ್ಕೆಬೇಕು."

ಬ್ರನನು ಹೇಳತೊಡಗಿದ —

“ ಬರ್ಲಿನದಲ್ಲಿಯ ಅರ್ನಾಲ್ಡ ಹಾಟವೆಗನ ಖ್ಯಾತಿಯನ್ನು ಕೇಳಿದರೆ ಅವನಲ್ಲಿ ಪಾಶವೀ ಭಾವನೆಗಳು ಬಲಿತಿರಲಿಕ್ಕೆ ಬೇಕೆಂದು ತೋರುತ್ತದೆ. ಅತ್ಯಾಚಾರಗಳ ಬಗ್ಗೆ ಅವನು ಕುಪ್ರಸಿದ್ಧನಿದ್ದಾನೆ. ಆಸ್ಟ್ರಿಯಾದ ನರ್ತಕಿ ಎಮಿ ಈಟನಳು ಕಳೆದ ವರ್ಷ ಉಪಹಾರ ಗೃಹದಲ್ಲಿ ಸತ್ತುಬಿದ್ದದ್ದು ನಿಮಗೆ ತಿಳಿದಿಲ್ಲವೆ? ಅವಳು ಆತ್ಮ ಹತ್ಯೆ ಮಾಡಿಕೊಂಡಳೆಂದರು. ಡೇಜರದ ತರುಣಿಯಾದ ಕೌಂಟೆಸಳು ಈಗೆರಡು ವರ್ಷಗಳ ಹಿಂದೆ ಓಡಿ ಹೋಗಿದ್ದು ಇದುವರೆಗೂ ಅವಳ ಸುಳಿವಿಲ್ಲ. ಈ ಎರಡೂ ಘಟನೆಗಳಲ್ಲಿ ಅರ್ನಾಲ್ಡನ ಹೆಸರು ಕೇಳಬರುತ್ತದೆ. ಕಳೆದ ಹೇಮಂತದಲ್ಲಿ ಸೈಬೇರಿಯಾದ ಮೃಗಯಾಪ್ರಾಸಾದದಲ್ಲಿ ನಡೆದ ಅತ್ಯಾಚಾರಗಳಲ್ಲಿಯೂ ಅರ್ನಾಲ್ಡನ ಅಂಗವಿದ್ದೇ ಇದೆ. ಈ ಕತೆ ಪತ್ರಿಕೆಗಳಿಗೆ ತಿಳಿದಿತ್ತು. ಆದರೆ ಪೋಲೀಸರು ವಿಶ್ವಪ್ರಯತ್ನ ದಿಂದ ಪತ್ರಿಕೆಗಳಿಗೆ ಮುಗದಾಣ ಹಾಕಿದರು.”

“ ಹೌದು, ನನಗೆ ಅದೆಲ್ಲ ಗೊತ್ತಿದೆ. ಸದ್ಯಕ್ಕೆ ಅದರ ಉಪಯೋಗವಾಗುವಂತಿಲ್ಲ. ಸಾಧ್ಯವಿದ್ದರೆ ಈಗ ಈ ಅರ್ನಾಲ್ಡನು ನನ್ನ ತಾಯ್ತಂದೆಗಳು ಮತ್ತು ಬಂಧುವಿನಲ್ಲಿಟ್ಟಿದ್ದ ನಿಷ್ಠೆಯನ್ನು ಕೊನೆಗಾಣಿಸಬೇಕು. ಇವನನ್ನು ಆ ಇತರ ಪ್ರಯೋಗಜಾತರ ಪ್ರಮುಖನನ್ನಾಗಿಸಿದರೆ ಇವರು ಯಾವ ಬೇಕಾದ ಕಾರ್ಯವನ್ನು ಸಾಧಿಸಬಲ್ಲರು.”

“ ಪ್ರಭು, ಸಾಮ್ರಾಟರು ಬರುವ ವರ್ಷ ಇಂಗ್ಲಂಡಿನ ಮೇಲೆ ದಂಡಯಾತ್ರೆ ನಡೆಸತಕ್ಕವರಿದ್ದಾರೆ.” ಎಂದು ಬ್ರನನು ಸಾಶಂಕನಾಗಿ ಕೇಳಿದ.

“ ಹೌದು. ಇಪ್ಪತ್ತು ವರ್ಷಗಳ ಹಿಂದೆ ಆಡಿದ ಯುದ್ಧವನ್ನೇ ನಾವಿನ್ನೂ ಮರೆಯದಿರುವಾಗ ಈಗ ಇನ್ನೊಂದು ಯುದ್ಧಕ್ಕಾಗಿ ಜನರನ್ನು ಹುರಿದುಂಬಿಸುವದು ಕಷ್ಟಸಾಧ್ಯ.”

“ ಇಂಗ್ಲಂಡಕ್ಕೆ ಸುರಂಗಮಾರ್ಗವೂ ರಚಿತವಾಗಿದೆಂಬುದೂ ತಮಗೆ ತಿಳಿದಿರಬಹುದು” ಎಂದು ಇದು ವರೆಗೆ ಮೌನಿಯಾಗಿದ್ದ ಪ್ಲೊಯೆಜನು ಹೇಳಿದ.

“ ಏನು ಇಂಗ್ಲಂಡದ ಸುರಂಗಮಾರ್ಗ” ಎಂದು ರಾಜಕುಮಾರ.

“ ಹೌದು. ಇಂಗ್ಲಂಡಕ್ಕೆ ಸುರಂಗ ಮಾರ್ಗ”

“ ನಿನಗೆ ಖಂಡಿತವಾಗಿ ಗೊತ್ತಿದೆಯೆ ? ”

“ ನಾನು ಆ ಸುರಂಗ ಮಾರ್ಗವನ್ನೆಲ್ಲ ಸುತ್ತಾಡಿ ನೋಡಿಕೊಂಡು ಬಂದಿದ್ದೇನೆ ” ಎಂದು ಮುಗುಳ್ನಗೆಯಿಂದ ನುಡಿದು ಇತರರ ಮೇಲೆ ಯಾವ ಪರಿಣಾಮವಾಗುವದೆಂದು ನೋಡಹತ್ತಿದ. ಕೆಲವು ನಿಮಿಷ ಎಲ್ಲರೂ ಮೌನದಿಂದಿದ್ದರು. ಕೂಡಲೆ ಬ್ರನನು ಎದ್ದು ನಿಂತು.

“ ಪಿತೃಭೂಮಿಗೆ ಜಯವಾಗಲಿ ” ಎಂದನು.

“ ಹಿಂದುಳಿದ ಇಂಗ್ಲಂಡಕ್ಕೆ ಇದೊಂದು ಅಚ್ಚರಿ ” ಎಂದು ಸ್ಮಿಟನು ನುಡಿದ.

“ ನೀನೇಣಿಸಿದ್ದಕ್ಕಿಂತ ಅತ್ಯಾಶ್ಚರ್ಯ. ಆ ಸುರಂಗ ಮಾರ್ಗದಲ್ಲಿಯ ಗುಹೆಗಳಲ್ಲಿ ಡೋವರದಿಂದ ಲಂಡನಿನ ವರೆಗಿನ ಪ್ರದೇಶವನ್ನು ಉಧ್ವಸ್ತ ಗೊಳಿಸಲು ಸಾಕಾಗುವಷ್ಟು ಮದ್ದುಗುಂಡುಗಳನ್ನು ಸಂಗ್ರಹಿಸಿಡಲಾಗಿದೆ. ಕರಾವಳಿಯಿಂದ ಆದಷ್ಟು ಹೆಚ್ಚು ಒಳನಾಡನ್ನು ಉಧ್ವಸ್ತಗೊಳಿಸುವದೇ ಈ ಯೋಜನೆಯಿದ್ದಂತಿದೆ. ಈ ಸುರಂಗಮಾರ್ಗದಲ್ಲಿದ್ದುಕೊಂಡೇ ಬಾಂಬು ಗಳನ್ನು ಎಸೆಯಬಹುದು ಎಂದು ಜನರಲ ಈಷ್ವರಮನನ ಹೇಳಿಕೆ. ಇದ ರಲ್ಲಿ ಪ್ರಾಣಹಾನಿಯಂತೂ ಖಂಡಿತ. ಈ ಕಾರ್ಯಕ್ಕಾಗಿಯೆ ಅರ್ನಾಲ್ಡ ಮತ್ತು ಅವನಂಥ ನೂರಾರು ಜನರು ಬೇಕಾಗಬಹುದು. ಮೊದ ಲನೆ ಮಹಾಯುದ್ಧದಲ್ಲಿ ಜನರು ಪ್ರಾಣಾರ್ಪಣೆಗೆ ಸಿದ್ಧರಾದಂತೆ ಈಗ ಸಿದ್ಧರಾಗಲಾರರು. ಅಲ್ಲದೆ ಸಾಮ್ರಾಟರೂ ಈಗ ಜನಪ್ರಿಯರಾಗಿಲ್ಲ. ಆದ್ದರಿಂದ ತಮ್ಮ ಆಜ್ಞೆಯನ್ನು ಹಿಂದುಮುಂದಿನ ಯಾವ ವಿಚಾರವಿಲ್ಲದೆ ಪಾಲಿಸುವ ಜನರನ್ನು ಅವರು ಹುಡುಕಬೇಕಾಗಿದೆ. ”

“ ಅರ್ನಾಲ್ಡ ಮತ್ತು ಅವನ ಸಹಜಾತರು ”

“ ಹೌದು. ನನಗೀಗ ದಾರಿ ಕಾಣಹತ್ತಿತು. ನಮಗೆ ಜಯ ದೊರೆ ತರೆ ನಿಮ್ಮನ್ನು ಕಡೆಗಣಿಸುವದಿಲ್ಲೆಂದು ವಚನ ಕೊಡುತ್ತೇನೆ. ಸ್ಮಿಟ ನೀನೀಗ ಲಿಪಝಿಗಕ್ಕೆ ಹೋಗಿ ವರ್ನರನ ಈ ಪ್ರಾಣಿಗಳನ್ನು ಆದಷ್ಟು ಶೋಧಿಸು. ಅವರೊಡನೆ ಸಂಭಾಷಣೆ ನಡೆಸು. ಆದಷ್ಟು ನಿನ್ನ ಹಸ್ತಕ

ರಿಂದಲೇ ಎಲ್ಲವನ್ನೂ ತಿಳಿದುಕೊಳ್ಳು. ಅವರಲ್ಲಿ ಅಸಂತೋಷದ ಬೇಗೆಯನ್ನು ಹಬ್ಬಿಸು. ಆದರೆ ಬಹು ಜಾಗ್ರತೆ ಎಲ್ಲಿಯಾದರೂ ಎಡವಿದೆಯೋ ನಮ್ಮ ಅವತಾರ ಸಮಾಪ್ತಿ ಆದಂತೆ. ಒಂದು ವೇಳೆ ವಿಜಯಿಗಳಾದರೆ— ” ಈಟಲ ಮಾತು ನಿಲ್ಲಿಸಿದ.

“ ಕೈಸರ-ಈಟಲನಿಗೆ ಜಯವಾಗಲಿ ” ಎಂದು ಉಳಿದವರು ಗಂಭೀರವಾಗಿ ಘೋಷಿಸಿದರು.

೭

“ ಎಲ್ಸಾ ಇದು ನಿಜವೆ ?”

“ ಯಾವದು ? ” ಎಂದು ಎಲ್ಸಾಳು ಆಶ್ಚರ್ಯದಿಂದ ಅರ್ನಾಲ್ಡನನ್ನು ನೋಡಿದಳು. ಪಾಟ್ಸಡಾಮದಲ್ಲಿಯ ರಾಜಗೃಹದ ಎದುರಿನ ಉಪವನದಲ್ಲಿ ಇವರಿಬ್ಬರೂ ತಿರುಗಾಡುತ್ತಿರುವಾಗ ಅರ್ನಾಲ್ಡನು ಹಠಾತ್ತಾಗಿ ಮೇಲಿನಂತೆ ಪ್ರಶ್ನಿಸಿದ.

“ ನೀನು ಕೇಳಿದ್ದಾದರೂ ಏನು ? ಎಂದಳು ಎಲ್ಸಾ ಮತ್ತೆ.

“ ನೀನು ಹಾನ್ಸನನ್ನು ಎಂದು ಮದುವೆಯಾಗುವದು ನಿಜವೆ ? ”

“ ನಾನಿದನ್ನು ನಿನ್ನ ಬಾಯಿಂದಲೆ ಇದೀಗ ಕೇಳುತ್ತಿದ್ದೇನೆ. ಒಂದು ವೇಳೆ ಅದು ನಿಜವಿದ್ದರೂ ಅದರಿಂದ ನಿನಗೇನು ಎಂಬುದೇ ನನಗೆ ತಿಳಿಯುವದಿಲ್ಲ ? ” ಎಂದು ಅವಳು ಅಧೀರಳಾಗಿಯೇ ನುಡಿದಳು.

“ ಬೇರೆ ಯಾವ ಪ್ರಿಯಕರನಾಗಲೀ ಪತಿಯಾಗಲೀ ನಿನ್ನನ್ನು ಹೊಂದಲಾರ. ನೀನು ನನ್ನವಳು ” ಎಂದು ದೃಢಚಿತ್ತದಿಂದ ನುಡಿದ. ಆದರೆ ಅವನ ಕಣ್ಣುಗಳಲ್ಲಿ ವಿಷಯವಾಸನೆ ತುಂಬಿ ಹೊರಸೂಸುತ್ತಿತ್ತು.

“ ಹೀಗೆ ಹೇಳಲು ನಿನಗೆ ಅಧಿಕಾರವೆಲ್ಲಿದೆ ಅರ್ನಾಲ್ಡ? ಮುಗ್ಧೆಯಾದ ನಾನು ಹಾರ್ಜದಲ್ಲಿ ನನ್ನ ಸರ್ವಸ್ವವನ್ನು ನಿನಗೆ ಅರ್ಪಿಸಿದ ದಿನವನ್ನು ಮರೆತಿರುವಿ. ಕಾಮಿನಿಯರ ನಯನಜಾಲಗಳಿಗೆ ಬಲಿಬೀಳುವವನಲ್ಲ; ನೀನು ಹ್ಯಾನ್ಸನನ್ನು ಮದುವೆಯಾಗುವದೊಳಿತು ಎಂದು ನನ್ನನ್ನು ಕಾಡಿ

ನಲ್ಲಿ ಏಕಾಕಿನಿಯಾಗಿ ಬಿಟ್ಟು ತೆರಳಿದಿ ? ನಿನಗದು ನೆನಪಿನಲ್ಲವೆ ? ” ಎಂದು ಎಲ್ಸಾಳು ಮೂದಲಿಕೆಯಿಂದಲೇ ಕೇಳಿದಳು.

ಬೇರೆ ಗಂಡಸು ಯಾರಾದರೂ ಈ ಮಾತುಗಳನ್ನು ಕೇಳಿದರೆ ಅವಮಾನ ದಗ್ಧರಾಗಬಹುದಾಗಿತ್ತು. ಆದರೆ ತನ್ನ ಯಾವದೆ ಅಕೃತ್ಯಕ್ಕಾಗಿ ಪಶ್ಚಾತ್ತಾಪಪಡುವ ಬುದ್ಧಿಯೇ ಅವನಲ್ಲಿರಲಿಲ್ಲ. ತನ್ನ ಪ್ರಯೋಗ ಜಾತರಲ್ಲಿ ಯಾವನೈತಿಕ ಭಾವನೆಯು ಇರದಂತೆ ವರ್ನರನು ದಕ್ಷತೆ ವಹಿಸಿದ್ದ. ಅರ್ನಾಲ್ಡನೇನೂ ಈ ವಿಷಯದಲ್ಲಿ ಅಪವಾದವಾಗಿರಲಿಲ್ಲ. ರಂಬಾಟ ವೆಬ್ಬಿಸಲು ಎಲ್ಸಾಳು ಹುಡುಗಾಟಿಕೆ ನಡೆಸಿದ್ದಳೆಂದೇ ಅವನ ಮತವಾಗಿತ್ತು. ಇಂಥ ಅನೇಕ ರಂಬಾಟಗಳನ್ನು ಅವನು ಕಂಡಿದ್ದ. ಆ ಪ್ರಸಂಗಗಳಲ್ಲೆಲ್ಲ ಇವನು ಮೂಸಿದ ಹೂವನ್ನು ನಿರ್ವಿಕಾರದಿಂದ ಎಸೆಯುವಂತೆ ತನ್ನ ಭೋಗಿನಿಯರನ್ನೆಲ್ಲ ತ್ಯಜಿಸಿಬಿಟ್ಟಿದ್ದನು.

ಆದರೆ ಎಲ್ಸಾಳ ವಿಷಯ ಬೇರೆಯಾಗಿತ್ತು. ಅವಳನ್ನು ಬಿಟ್ಟು ಕೊಡುವ ಇಚ್ಛೆ ಅವನಿಗಿರಲಿಲ್ಲ. ಇಡೀ ಬರ್ಲಿನದಲ್ಲಿ ಅವಳು ಪ್ರಿಯವಾದ ವ್ಯಕ್ತಿಯಾಗಿದ್ದಳು. ಇತರರು ನಯನ ಜಾಲಗಳನ್ನು ನಿರ್ಮಿಸುವ ಧೈರ್ಯ ತೋರಿದ್ದರೆ ಎಲ್ಸಾಳು ಇವನವಳಾಗಿದ್ದಳು. ಈ ವಿಚಾರ ಸುಳಿದೊಡನೆ ಅವನು ಅತ್ಯಂತ ಆವೇಶದಿಂದ

“ ಇಲ್ಲ. ನಾನೇನನ್ನೂ ಮರೆತಿಲ್ಲ. ನೀನು ಪುನಃ ನನ್ನನ್ನು ಸೇರುವಿಯಾಗಿ ಇಚ್ಛಿಸುತ್ತೇನೆ. ಹಾನ್ಸನಾಗಲಿ, ಬೇರೆ ಯಾರಾಗಲಿ ನಮ್ಮ ಮಾರ್ಗದಲ್ಲಿ ಕಂಟಕವಾಗಲಾರರು ” ಹೇಳಿದ.

ಎಲ್ಸಾಳ ಮುಖ ಬಿಳುಪೇರಿತು. ಅವಳು ಈ ರೀತಿಯ ಉತ್ತರವನ್ನು ಅಪೇಕ್ಷಿಸಿರಲಿಲ್ಲ. ವಯಸ್ಸಿನಿಂದ ಅವಳಿಸ್ನೂ ಚಿಕ್ಕವನಿದ್ದರೂ ಅರ್ನಾಲ್ಡನ ಹೃದಯ ಪ್ರೀತಿಯಿಂದ ಹೀಗೆ ಕೂಗಿ ಹೇಳುತ್ತಿರುವದಿಲ್ಲ. ಆದರೆ ಪಾಶವೀ ಭಾವನೆಯೆ ಅವನಲ್ಲಿ ಹೆಚ್ಚಾಗಿದೆಂಬುದನ್ನು ಕಂಡುಕೊಳ್ಳುವಷ್ಟು ಅವಳು ಪ್ರಗಲ್ಭೆಯಾಗಿದ್ದಳು. ಅರ್ನಾಲ್ಡನ ಸುಂದರ ಮುಖವು ಘೂಯವಾಗಿ ಹೋಗಿದೆಂದು ಭಾವಿಸಿದ ಅವಳಿಗೆ ಅವನನ್ನು ಕಂಡು ಹೆದರಿಕೆಯಾಯಿತು.

ಅವನು ಸಮೀಪಕ್ಕೆ ಬಂದೊಡನೆ ಅವನನ್ನು ತಡೆಯಲು ಕೈಗಳನ್ನು ಮುಂದೆ ಚಾಚಿ

"ಇಲ್ಲ, ನನ್ನನ್ನು ಮುಟ್ಟಬೇಡ, ನಾನು ನಿನ್ನನ್ನು ದ್ವೇಷಿಸುತ್ತೇನೆ." ಎಂದು ಪ್ರತಿಭಟಿಸಲೆತ್ನಿಸಿದಳು. ಆದರೆ ಅರ್ನಾಲ್ಡನ ಕೈಗಳೆರಡೂ ಇಕ್ಕಳ ದಂತೆ ಅವಳ ನಡುವನ್ನು ಹಿಡಿದುಕೊಂಡವು.

"ಸುಳ್ಳು. ನೀನು ಸುಳ್ಳಾಡುವಿ ಎಂದು ನಿನಗೆ ತಿಳಿದಿದೆ. ನೀನು ನನ್ನನ್ನು ಪ್ರೀತಿಸುವಿ. ಇಲ್ಲವೆ ನೀನು ನನ್ನನ್ನು ದ್ವೇಷಿಸುತ್ತಿದ್ದರೂ ಅಷ್ಟೆ, ನೀನು ನನ್ನ ಸತಿ" ಎಂದು ನಗುತ್ತ ನುಡಿದನು.

"ನಿನ್ನ ಸತಿ! ದೊಡ್ಡ ಗೌರವ. ನಿನ್ನ ಪತ್ನಿಯಾಗಿರುವದಕ್ಕಿಂತ ಯಾ ರೊಬ್ಬರ ಉಪಪತ್ನಿಯಾಗಿರಬಲ್ಲೆ" ಎಂದು ತಿರಸ್ಕಾರದಿಂದ ಅವನ ಉಕ್ಕಿ ನೆದೆಯನ್ನು ಸೀಳಲೆಂದೇ ಕಠೋರವಾದ ವಾಗ್ಬಾಣಗಳನ್ನು ಎಸೆದಳು. ಅವನ ಮುಖ ರೊಚ್ಚಿನಿಂದ ಕೆಂಪೇರಿತು. ಟೊಂಕದ ಹಿಡಿತ ಶಿಥಿಲವಾಯಿತು. ತನ್ನನ್ನೆಲ್ಲಿ ಹೊಡೆದು ಬಿಡುವನೊ ಎಂದು ಎಲ್ನಾಳು ಹೆದರಿದಳು.

"ನಿನ್ನ ಬಯಕೆ ಏನೇ ಇದ್ದರೂ ನನ್ನ ಮನಸು ಬದಲಿಸಲಾರದು. ಏನೆಂಬುದನ್ನು ಬೇಗನೆ ನಿರ್ಧರಿಸು" ಎಂದು ಅರ್ನಾಲ್ಡನು ಅಟ್ಟಹಾಸದಿಂದ ನುಡಿದು ಗಕ್ಕನೆ ತಿರುಗಿ ಹೊರಟುಹೋದನು.

ಎಲ್ನಾಳು ಅವನನ್ನೇ ನೋಡುತ್ತ ನಿಂತಳು. ಇಷ್ಟೊಂದು ಅವಮಾನಿ ತಳಾಗಿದ್ದರೂ ಆಕ್ಷಣಕ್ಕೆ ಅವಳು ಅರ್ನಾಲ್ಡನನ್ನು ಇನ್ನಷ್ಟು ಪ್ರೀತಿಸುತ್ತಿದ್ದಳು. ಸ್ತ್ರೀ ಸ್ವಭಾವವೇ ವಿಚಿತ್ರವಾದುದು ? ಅವಳಿಗೆ ಒಂದು ರೀತಿಯ ವಿಚಿತ್ರ ಆನಂದವೆನಿಸಿತು. ತನ್ನನ್ನು ಮದುವೆಯಾಗುವದಾಗಿ ಅವನು ಹೇಳಿರಲಿಲ್ಲವೆ?

ಇನ್ನು ಕೆಲದಿನ ಅಸಮ್ಮತಿಯನ್ನೇ ತೋರಬೇಕು, ಅವನನ್ನು ಪೀಡಿ ಸುವದಕ್ಕಾಗಿ ಇತರರೊಡನೆ ಪ್ರಣಯ ಚೇಷ್ಟೆ ನಡೆಸಿದಂತೆಯೂ ಮಾಡ ಬೇಕು. ನಂತರ ಒಪ್ಪಿಕೊಳ್ಳುವದರಿಂದ ಇನ್ನಷ್ಟು ಸೊಗಸಾದೀತು ! ಒಮ್ಮೆ ಅವನ ಸತಿಯಾದನಂತರ ಅವಳ ನಳಿದೋಳಿಗೆ ಏನೋ ಮೃದುಸ್ಪರ್ಶವಾದಂತಾ ಯಿತು. ತಿರುಗಿ ನೋಡುವಷ್ಟರಲ್ಲಿ ರಾಜಕುಮಾರ ವಿಲಿಯಂನು ಹತ್ತಿರ ನಿಂತಿದ.

"ಕುಮಾರಿ ಸೀಬರ್ಟ್, ನಿನ್ನನ್ನು ಎಲ್ಲೆಲ್ಲಿಯೂ ಶೋಧಿಸಿದೆ. ಈಗ ಒಂದು ವಾರದಿಂದ ನಿನ್ನೊಡನೆ ಮಾತಾಡುವ ಭಾಗ್ಯ ದೊರೆಯಲಿಲ್ಲ. ಈಗ ನೋಡಿದರೆ ನೀನು ಈ ಉಪವನದ ಮೂಲೆಯೊಂದರಲ್ಲಿ ನಿಂತು ಸ್ವಪ್ನ ಲೋಕ ದಲ್ಲಿ ವಿಹರಿಸುತ್ತಿರುವಿ ನಿನ್ನ ಮಧುರ ಸ್ವಪ್ನಗಳನ್ನು ತಾನು ತಿಳಿದು ಕೊಳ್ಳಬಹುದೆ?" ಎಂದು ನಯವಾಗಿ ಹೇಳಿದ.

ಎಲ್ಸಾಳು ಮಂದಸ್ಮಿತೆಯಾಗಿ ಅವನಿಗೆ ವಂದನೆಗಳನ್ನು ಅರ್ಪಿಸಿದಳು.

"ಈಗಿಲ್ಲ. ಇನ್ನೂ ಕೆಲ ದಿನಗಳ ನಂತರ ನಾನು ನನ್ನ ಸ್ವಪ್ನ ಗಳನ್ನು ತಮಗೆ ತಿಳಿಸಬಲ್ಲೆ. ಆದರೆ ತಮಗೆ ಅವು ರುಚಿಸುವವೊ ಹೇಳ ಲಾರೆ" ಎಂದು ರಾಜಕುಮಾರನ ಪ್ರಶ್ನೆಗೆ ಉತ್ತರಿಸಿದಳು. ಅವಳು ನಿಂತಿದ್ದ ಲತಾಮಂಟಪವು ಜನರ ಕಣ್ಣಿಗೆ ಮರೆಯಾಗಿದ್ದುದರಿಂದ ವಿಲಿಯಂ ನಿಗೆ ಉತ್ತೇಜನ ದೊರೆತಂತಾಯಿತು.

"ನಿನಗೆ ಸಂಬಂಧಿಸಿದ್ದೆಲ್ಲ ನನಗೆ ಸಂಬಂಧಿಸಿದ್ದು. ನಾನು ನಿನ್ನನ್ನು ಪ್ರೀತಿಸುತ್ತಿದ್ದೇನೆಂಬುದು ನಿನಗೆ ತಿಳಿದಿದೆಯೆ? ಇಲ್ಲ. ನನ್ನ ಪ್ರೇಯಸಿ, ನಿನ್ನೆದುರು ನನ್ನ ಹೃದಯವನ್ನು ಬಿಚ್ಚಿಡಲು ಅವಕಾಶವನ್ನು ಕೊಡು. ನೃತ್ಯಾಗಾರದಲ್ಲಿ ಅಂದು ನಿನ್ನನ್ನು ಕಂಡಂದಿನಿಂದ ನಾನು ನಿನ್ನ ಮೂರ್ತಿ ಯನ್ನು ನನ್ನ ಹೃದಯಮಂದಿರದಲ್ಲಿ ಸ್ಥಾಪಿಸಿದ್ದೇನೆ. ಎಲ್ಸಾ ಈ ರೀತಿ ಮಾತಾಡಲು ನನಗೆ-ಅಧಿಕಾರವಿಲ್ಲೆಂಬುದು ನನಗೆ ತಿಳಿದಿದೆ. ನಾನೇನು ಹೇಳುತ್ತಿದ್ದೇನೆಂಬುದು ನಿನಗೀಗ ಹೊಳೆದಿರಬಹುದು?"

ಅವನ ಕಳಕಳಿಯ ಆ ಮಾತುಗಳನ್ನು ನೆಚ್ಚದಿರಬೇಕಾದಂಥ ಕಾರಣ ವೇನೂ ಇರಲಿಲ್ಲ ಅವಳಿಗೆ. ಕನಸಿಲ್ಲಿದ್ದವರಂತೆ ಅವಳು ಈ ಮಾತು ಗಳನ್ನು ಆಲಿಸಿದಳು. ಇದು ತಪ್ಪು ಎಂದು ಅವಳಿಗೆ ಖಂಡಿತವಾಗಿದ್ದರೂ ಅರ್ನಾಲ್ಡನ ಔದ್ಧತ್ಯದ ನಂತರ ಈ ಆಗ್ರಹದ ನುಡಿಗಳು ಅವಳ ನೊಂದ ಹೃದಯಕ್ಕೆ ಸಮಾಧಾನವಿತ್ತವು. ಭಾವೀ ಸಾಮ್ರಾಟನ ಹೃದಯವನ್ನು ಸೂರೆಗೊಂಡದ್ದಕ್ಕಾಗಿ ಅವಳಿಗೆ ಹೆಮ್ಮೆಯುಂಟಾಗದಿರಲಿಲ್ಲ. ಈ ಇಪ್ಪತ್ತು ವರ್ಷಗಳಲ್ಲಿ ಜರ್ಮನಿಯಲ್ಲಿ ಜನ ಜಾಗ್ರತಿಯಾಗಿದ್ದರೂ ರಾಜ-ಕುಲವೆಂದರೆ ಇನ್ನೂ ನೆಲಮುಟ್ಟಿ ನಮಸ್ಕರಿಸುವ ದಿನಗಳು ಕಳೆದು ಹೋಗಿರಲಿಲ್ಲ.

“ ನಿಮ್ಮ ಮಾತುಗಳನ್ನು ಕೇಳಲಾರೆ ಪ್ರಭು ! ನೀವು ಹೀಗೆ ಆಡುವದು ತಪ್ಪಾಗುವದು. ನಮ್ಮಿಬ್ಬರಲ್ಲಿ ಪ್ರೇಮ ಸಾಧ್ಯವಿಲ್ಲೆಂಬುದನ್ನು ನೀವೂ ಅರಿತಿರುವಿರಿ ” ಎಂದು ನಯದಿಂದ ತನ್ನ ಕೈಗಳನ್ನು ಬಿಡಿಸಿಕೊಳ್ಳುತ್ತ ಅರುಹಿದಳು.

“ ನನಗೆ ಗೊತ್ತು. ಆದರೆ ನಾನು ನಿನ್ನನ್ನು ಪ್ರೀತಿಸುತ್ತೇನೆ ಎಂದು ಹೇಳುವ ವರೆಗಾದರೂ ನಾವಿಲ್ಲಿ ಇಬ್ಬರೆ ಏಕಾಂತದಲ್ಲಿ ಅನುಭವಿಸಿದ ಸುಖದ ಮಹತ್ವವನ್ನು ನೀನು ಅರಿಯಲಾರೆಯಾ ? ನನ್ನ ತಂದೆಯಾಗಲಿ, ಇತರ ರಾಜಕೀಯ ಅಧಿಕಾರಿಗಳಾಗಲಿ ಕುಣಿಸಿದಂತೆ ಕುಣಿಯುವ ಸೂತ್ರದ ಬೊಂಬೆ ನಾನು ಎಂಬುದನ್ನು ಮರೆತು ಕೆಲ ಸಮಯವಾದರೂ ನಾನು ಸ್ವತಂತ್ರನಂತೆ, ಸ್ವಚ್ಛಂದನಾಗಿ ವಿಹರಿಸಲಾರೆನೆ ? ಎಲ್ಸಾ ನನ್ನದು ತಪ್ಪಾಗಿದ್ದರೂ, ನೀನು ನನ್ನ ಪ್ರೇಮವನ್ನು ಒಪ್ಪಲಾರೆಯಾದರೂ ಕೆಲಸ ನಿಮಿಷಗಳವರೆಗೆ ಸ್ವತಂತ್ರನಾಗಿ ಬಾಳಗೊಡಲಾರೆಯಾ ? ”

ಎಲ್ಸಾಳು ಇದನ್ನು ಕೇಳಿ ಆಚ್ಚರಿಗೊಂಡಳು. ರಾಜಕುಮಾರನು ಈ ರೀತಿ ಮಾತಾಡಿದ್ದನ್ನು ಅವಳೆಂದಿಗೂ ಕೇಳಿರಲಿಲ್ಲ. ರಾಜಕುಲದ ಕರ್ತವ್ಯ ಕರ್ಮಗಳಿಂದ ಈ ಸುಂದರನು ಜರ್ಜರನಾಗಿದ್ದ. ಅವನಿಗಾಗಿ ಇವಳಲ್ಲಿ ಅಪಾರ ಕರುಣೆ ತಲೆದೋರಿತು. ಅವನ ಮಾತು ಮುಗಿದೊಡನೆ ಒದಿಗಿದ್ದ ಆಸನದಲ್ಲಿ ಕುಕ್ಕರಿಸಿದ. ಅಸಹ್ಯ ವೇದನೆಯಿಂದ ಮುಖವನ್ನು ಕೈಗಳಲ್ಲಿ ಮುಚ್ಚಿಕೊಂಡ. ಎಲ್ಸಾಳು ಮೃದುವಾಗಿ ಅವನ ತಲೆನೇವರಿಸಿದಳು.

“ ಹೀಗೆ ಮಾತಾಡುವದು ಹುಚ್ಚುತನ. ನಿಮ್ಮ ಬಯಕೆಯಂತೆ ನಾನು ನಿಮ್ಮನ್ನು ಪ್ರೀತಿಸುವದು ಸಾಧ್ಯವಿಲ್ಲ. ಒಂದು ವೇಳೆ ಹಾಗೆ ಪ್ರಯತ್ನಿಸಿದರೂ ನಮ್ಮಿಬ್ಬರಿಗೆ ತೊಂದರೆಗಳು ತಪ್ಪಲಾರವು. ನಮ್ಮಿಬ್ಬರಲ್ಲಿ ಅಜಗಜಾಂತರವಿದೆಂ ”ದಳು.

ಅವಳ ಹಸ್ತಸ್ಪರ್ಶದಿಂದ ಚೇತರಿಸಿದ ಅವನು ಮುಖವನ್ನು ಮೇಲಕ್ಕೆತ್ತಿ ಅವಳ ಆ ಹಸ್ತವನ್ನು ಹಿಡಿದು ಅದನ್ನು ಬುರಬುರನೆ ಚುಂಬಿಸಿದ. ಅವಳು ಕೈ ಬಿಡಿಸಿಕೊಳ್ಳಲೆತ್ನಿಸಿದಳು. ಆದರೆ ಅವನು ಬಲವಂತದಿಂದ ಅವಳನ್ನು ತನ್ನ ಬಳಿಗೇ ಶಿಲಾಸನದ ಮೇಲೆ ಕುಳ್ಳಿರಿಸಿಕೊಂಡ.

"ಎಲ್ಸಾ, ನಾನು ಯುವರಾಜನಾಗಿರದಿದ್ದರೆ ನನ್ನನ್ನು ಪ್ರೀತಿಸುತ್ತಿದ್ದಿಯಾ ?" ಎಂದು ಮುಂಬಾಗಿ ಆಗ್ರಹದಿಂದ ಕೇಳಿದ. ತನ್ನ ತೀರ ಸಮೀಪದಲ್ಲಿದ್ದ ಅವನ ಆ ಸುಂದರ ಮುಖವನ್ನು ದೃಷ್ಟಿಸಿದಳು. ರಾಜಕುಮಾರನ ಈ ಭಾವಾವೇಗದ ಪ್ರಣಯವೆತ್ತ! ಅರ್ನಾಲ್ಡನ ಉದ್ಧತ ವಾಗಾಡಂಬರವೆತ್ತ! ಅರ್ನಾಲ್ಡನು ಈ ರೀತಿ ತನ್ನನ್ನು ಪ್ರೀತಿಸಬಾರದೇಕೆ? ಇವನಂತೆ ದೃಷ್ಟಿಯ ಕಣ್ಣುಮುಚ್ಚಾಲೆಯನ್ನೇಕೆ ಆಡಬಾರದು? ತಾನು ಅವನ ದಾಸಿ ಎಂಬ ಒಡೆತನದ ಭಾವದಿಂದಲೆ ತನ್ನನ್ನು ಅವನು ಕಾಣುವದೇಕೆ? ಪುನಃ ಅವಳಲ್ಲಿ ರೋಷಾಗ್ನಿಯು ಭುಗಿಲ್ಲೆಂದಿತು. ಅರ್ನಾಲ್ಡನು ಕ್ಷಮೆ ಬೇಡುವ ವರೆಗೆ ಅವನನ್ನು ಕಾಡಿಸತಕ್ಕದ್ದು. ಅವನನ್ನು ಪೀಡಿಸುವ ಆಯುಧವೀಗ ದೊರೆತಿದೆ. ಅವನ ಪ್ರತಿಸ್ಪರ್ಧಿಯು ಯುವರಾಜನೇ ಆಗಿರುವದರಿಂದ ಅವನು ನಿರುಪಾಯನಾಗುವನು ಎಂದು ಅವಳು ವಿಚಾರಮಗ್ನಳಾಗಿದ್ದಳು.

"ಎಲ್ಸಾ, ಹೇಳು, ನಾನು ರಾಜಕುಮಾರನಾಗಿರದಿದ್ದರೆ ?" ಎಂದು ವಿಲಿಯಂನು ಪುನಃ ಪ್ರಶ್ನಿಸಿದ.

ಒಂದು ಕ್ಷಣ ಅವಳು ತಡವರಿಸಿದಳು. ತನ್ನ ಉತ್ತರದ ಪರಿಣಾಮವೇನಾಗಬಹುದೆಂದು ಬಹುಶಃ ಅವಳ ಆಲೋಚಿಸಿದಬಹುದು. ಇಡೀ ದೇಶದ ಭವಿತವ್ಯವು ತನ್ನ ಉತ್ತರವನ್ನು ಅವಲಂಬಿಸಿದೆ ಎಂದು ಅವಳಿಗೆ ಭಾಸವಾಯಿತು. ಅವಳ ಉತ್ತರದಿಂದ ಇಡೀ ನಾಡಿನ ಪರಿಸ್ಥಿತಿಯೆ ಬದಲಾಗಬಹುದು!

"ನೀವು ಯುವರಾಜರಾಗಿರದಿದ್ದರೆ ನಾನು—" ಎಂದು ಅವಳು ಮುಂದೆ ಉತ್ತರಿಸಲಾರದೆ ತನ್ನ ಚೆಂದುಟಿಗಳನ್ನು ಅವನಗರ್ಪಿಸಿದಳು. ಆದರೆ ಕೂಡಲೇ ಅವನ ಆಲಿಂಗನದಿಂದ ಬಿಡಿಸಿಕೊಂಡು ಲತಾಮಂಟಪದಿಂದ ಓಡಿಹೋದಳು.

ಜರ್ಮನಿಯ ಭಾವೀ ಸಾಮ್ರಾಟನು ಪುಟಿದೆದ್ದನು. ಅವಳನ್ನು ಹಿಂಬಾಲಿಸುವ ಪ್ರಯತ್ನ ಮಾಡಲಿಲ್ಲ. ಸಮಾಧಾನದ ಮುಗುಳ್ನಗೆ ನಗುತ್ತ ನಿಂತನು.

" ಕಾಮಿನಿಯರ ಚಿತ್ತಾಪಹರಣಕ್ಕೆ ಅನೇಕ ದಾರಿಗಳು " ಎಂದು ನುಡಿದು ಸೀಗಾರೇಟೊಂದನ್ನು ಹೊತ್ತಿಸಿ ಅವನೂ ಅಲ್ಲಿಂದ ಹೊರಹೊರಟ. ತನ್ನ ಅಜ್ಜನ ಗುಣಗಳು ಯುವರಾಜ ವಿಲಿಯಂನಲ್ಲಿ ಸಂಪೂರ್ಣ ಇಳಿದಿದ್ದವು.

೮

ಮಧ್ಯಾಹ್ನ ಹನ್ನೆರಡು ಗಂಟೆ ಬಾರಿಸಿದ ಒಂದೆರಡು ನಿಮಿಷಗಳಲ್ಲಿಯೆ ನಾಲ್ಕುತುತ್ತು ಅನ್ನವನ್ನು ಬಾಯಿಗೆ ತುಂಬಿಕೊಳ್ಳಲೆಂಬ ಆತುರದಿಂದ ಕಾರಖಾನೆಗಳಿಂದ ಹೊರಬಿದ್ದವರಿಂದ ಹ್ಯಾನೋವರದ ಬೀದಿತುಂಬಿ ಹೋದವು.

ದಿನಾಲು ಸ್ವಲ್ಪ ಉತ್ಸಾಹದಿಂದ ತೆರಳುತ್ತಿದ್ದ ಈ ಜನಜಗುಂಳಿ ಇಂದು ಅದೇಕೋ ಉದ್ವೇಗದಿಂದ ಗುಂಪು ಗುಂಪಾಗಿ ವಿಂಗಡಿಸಲ್ಪಟ್ಟಿತ್ತು. ಪ್ರತಿಯೊಬ್ಬ ಕೆಲಸಗಾರನೂ ತನ್ನ ಕೈಯಲ್ಲಿದ್ದ ಹಸ್ತ ಪತ್ರಿಕೆಗಳನ್ನು ಆತುರದಿಂದ ಕಣ್ಣುಗಳಿಂದ ಓದುತ್ತ ನಡೆದಿದ್ದನು. ಸಮೀಪದ ಉಪವನದಲ್ಲಿ ತಮ್ಮ ಊಟ ಮುಗಿಸಲು ಕುಳಿತದ್ದವರೆಲ್ಲ ತಮ್ಮಲ್ಲಿ ಒಬ್ಬನು ಆ ಹಸ್ತ ಪತ್ರಿಕೆಯನ್ನು ಗಟ್ಟಿಸಿ ಓದುತ್ತಿದುದನ್ನು ಉತ್ಸುಕತೆಯಿಂದ ಕೇಳುತ್ತಿದ್ದರು. ಅವನ ಕರ್ಕಶ ದನಿಯ ವಾಚನವನ್ನು ಕೇಳಿ ಬೀದಿಯಲ್ಲಿ ಹೋಗುತ್ತಿದ್ದ ಕೆಲವರೂ ಕುತುಹಲದಿಂದ ಅಲ್ಲಿ ಬಂದು ನೆರೆದರು.

ಅವನ ಕೈಯಲ್ಲಿಯ ಕರಪತ್ರಿಕೆಯಿಂತಿತ್ತು—

"ಹ್ಯಾನೋವರದ ನಾಗರಿಕರೆ, ಇಂದಿಗೆ ಇಪ್ಪತ್ತು ವರ್ಷಗಳ ಮೊದಲು ಕೈಸರನೂ ಅವನ ಸರಕಾರವೂ ನಿಮ್ಮನ್ನು ಅದೇಕೆ, ಇಡೀ ಜಗತ್ತನ್ನೇ ಯುದ್ಧದಲ್ಲಿ ನೂಕಿದರು. ನಿಮ್ಮ ಮಕ್ಕಳು, ನಿಮ್ಮ ಗಂಡಂದಿರು, ನಿಮ್ಮ ಬಾಂಧವರು ಸಾವಿರಗಟ್ಲೆ ಫಾನ್ಸ, ಬೆಲ್ಜಿಯಂ, ರಶಿಯಾಗಳಿಗೆ ತೆರಳಿದರು. ಅಮಿತ ಜನರು ಅಲ್ಲಿಯೆ ಪ್ರಾಣಾರ್ಪಣ ಮಾಡಿದರು. ನಿಮ್ಮ ಹಾಳು ಸುರಿಯುತ್ತಿರುವ ಮನೆಗಳನ್ನೂ ನಿರ್ಗತಿಕರಾದ ಬಾಲಕರನ್ನೂ ನೀವು ಮರೆತಿರಾ? ಈ ನಮ್ಮ ಸಮೃದ್ಧ ಭೂಮಿಯು ಕ್ಷಾಮದೇವತೆಗೆ ಬಲಿದಾಯಾದುದನ್ನು ಅರಿತಿಲ್ಲವೆ? ನಿಮ್ಮ ಮಕ್ಕಳು ಹಸಿವೆಯಿಂದ ಕಕ್ರಾಂತರಾಗಿ ರೊಟ್ಟಿ, ರೊಟ್ಟಿ ಎಂದು ಗಂಟಲು ಹರಿದುಕೊಂಡಾಗ ಅವರಿಗೆ ಕೊಡಲು ನಿಮ್ಮ ಹತ್ತಿರ

ಒಂದು ತುಣುಕು ರೊಟ್ಟಿ ಕೂಡ ಇರಲಿಲ್ಲೆಂಬುದನ್ನು ನೀವು ಹೇಗೆ ಮರೆತಿರಿ! ಹ್ಯಾನೋವರದ ನಾಗರಿಕರೆ, ಆನಂತರ ಈಗ ದೇಶದಲ್ಲಿ ಶಾಂತತೆ ನೆಲಸಿದೆ. ಆದರೆ ಎಚ್ಚರಿಕೆ! ೧೯ಗಳರಲ್ಲಿಯಂತೆ ಈಗ ಪುನಃ ಫ್ರಾನ್ಸ, ಇಂಗ್ಲಂಡಗಳನ್ನು ವಕ್ರದೃಷ್ಟಿಯಿಂದ ನೋಡುವ ಮಹಾರಾಜನೊಬ್ಬನಿದ್ದಾನೆಂಬುದನ್ನು ಮರೆಯದಿರಿ. ಗಡಿನಾಡಿನತ್ತ ನುಗ್ಗತ್ತಿರುವ ನಮ್ಮ ಸೈನಿಕರ ಕುದುರೆಗಳ ಖುರಪುಟ ಧ್ವನಿಯೆ ಅವನ ಕಿವಿಗಳಲ್ಲಿ ದುಮುದುಮುಸುತ್ತಿದೆ. ಇಪ್ಪತ್ತು ವರ್ಷಗಳ ಹಿಂದಿನ ಹತ್ಯಾಕಾಂಡವನ್ನು ನೆನೆದು ರಣಹದ್ದುಗಳು ಅವನ ಸುತ್ತಲೂ ದಿನಾಲೂ ಮುಕರುತ್ತಿವೆ. ಹ್ಯಾನೋವರದ ನಾಗರಿಕರೆ ಎಚ್ಚರಿಕೆ! ಯುದ್ಧದ ಕಾರ್ಮೋಡಗಳು ಪುನಃ ಮುಸುಕುತ್ತಿವೆ. ನೀವು ಗುಲಾಮರಲ್ಲ, ಮಾನವರಿದ್ದೀರಿ ಎಂಬುದನ್ನು ಮರೆಯಬೇಡಿರಿ. ನಮ್ಮ ಪಿತೃಭೂಮಿಯು ಶಾಪವಾದ ಪ್ರಶಿಯಾದ ಸೈನ್ಯಶಾಖೆಯನ್ನು ತೋಷಿಸಲು ನೀವು ನಿಮ್ಮ ಪ್ರಾಣಾರ್ಪಣೆ ಮಾಡುವಿರಾ? ಇಲ್ಲ ಎಂದಿಗೂ ಇಲ್ಲ. ನಾಗರಿಕರೆ, ಎದ್ದೇಳಿ, ನಿಮ್ಮ ಘಾತಕರನ್ನು ಪ್ರತಿಭಟಿಸಿರಿ. ”

ಅವನು ಓದುತ್ತಿದ್ದಂತೆ ನೆರೆದಿದ್ದವರು ಪಿಸುಗುಡುತ್ತಿದ್ದ ಕೋಪದ ನುಡಿಗಳು ಈಗ ಸ್ಪಷ್ಟವಾಗಿದ್ದವು. ಅವರು ಕರಪತ್ರಿಕೆಗಳನ್ನೆಲ್ಲ ಕೋಪದಿಂದ ಬೀಸಾಡಿ ಅರಚಹತ್ತಿದರು:

“ ಸೈನ್ಯ ಶಾಖೆ ಹಾಳಾಗಲಿ ” “ ಘಾತಕರು ಅಳಿದು ಹೋಗಲಿ ” “ ಕೈಸರನ ಮನೆ ಹಾಳಾಗಲಿ ” “ ನಮಗೆ ಶಾಂತಿ ಬೇಕು; ಯುದ್ಧ ಬೇಕಿಲ್ಲ ”

ಇದುವರೆಗೆ ಈ ಜನಜಂಗುಳಿಯನ್ನು ನಿರೀಕ್ಷಿಸುತ್ತಿದ್ದ ಹೆಣ್ಣುಮಗಳೊಬ್ಬಳು ಈ ಘೋಷಗಳನ್ನು ಕೇಳಿ ಸಮಾಧಾನದ ನಿಟ್ಟುಸುರು ಬಿಟ್ಟು, ಮುಗುಳ್ನಗೆಯಿಂದ ಜನ ಸಂದಣಿಯಲ್ಲಿ ದಾರಿ ಮಾಡಿಕೊಂಡು ಆ ಕರಪತ್ರಿಕೆಯನ್ನು ಓದುತ್ತಿದ್ದವನು ನಿಂತ ಬಾಕಿನ ಮೇಲೆ ನೆಗೆದಳು. ಇವಳನ್ನು ಕಂಡೊಡನೆ ಜನರೆಲ್ಲ ಸ್ತಬ್ಧರಾದರು. ಅವಳೊಮ್ಮೆ ತಿರಸ್ಕಾರದ ನಗೆಬೀರಿ ಮಾತಿಗೆ ಮೊದಲಿಟ್ಟಳು.

“ ಹಾಗಾದರೆ ಇನ್ನೊಂದು ಯುದ್ಧದ ಮಾತೆತ್ತಿದರೆ ನಿಮಗೆ ಕೋಪ ಬರುವದಿಲ್ಲವೆ ? ಕೈಸರನ ಮನೆ ಹಾಳಾಗಲಿ ಎಂದು ಘೋಷಿಸುವಷ್ಟು ನೀವು ರೊಚ್ಚಿಗೆದ್ದಿರುವಿರಲ್ಲವೆ? ಹಾಗಾದರೆ ಇಂದು ಮಧ್ಯಾಹ್ನದಲ್ಲಿ ನೀವು ಕೆಲಸಕ್ಕೆ ಹೋಗದೆ ನಿಮ್ಮ ಗಂಟಲು ಹರಿದು ಹೋಗುವ ವರೆಗೆ ಘೋಷಿಸುತ್ತ ವೀರ ವಣಿಗೆ ಹೊರಡಿಸುವಿರಿ. ಸಂಜೆಗೆ ಗಡಂಗದಲ್ಲಿ ಮೈಮರೆಯುವಂತೆ ಕುಡಿದು ಪುನಃ ನಾಳಿಗೆ ಕೈಸರನ ವಿನೀತ ನಾಗರಿಕರಂತೆ ಕೆಲಸಕ್ಕೆ ಹೋಗುವಿರಿ. ಇಂದಿನ ಕೃತಿಯು ಬಗ್ಗೆ ನಿಮಗೆ ಪಶ್ಚಾತ್ತಾಪವೆನಿಸುವದು. ನನ್ನ ಶೂರ ನಾಗರಿಕರನ್ನು ನಾನು ಚನ್ನಾಗಿ ಅರಿತಿದ್ದೇನೆ ! ನೀವು ಕುರಿಗಳೆಂದು ಬಿಸ್ಮಾರ್ಕನು ಕರೆದದ್ದು ಉಚಿತವೇ ಆಗಿದೆ. ನೀವು ಬರಿ ಕುರಿಹಿಂಡು ! ಮತ್ತೇನೂ ಅಲ್ಲ. ಸೈನ್ಯ ಭರತಿಯ ಆಜ್ಞೆ ನಗರದ ಗೋಡೆಗಳಿಗೆಲ್ಲ ಅಂಟಿಸಲಾಯಿತೆಂದರೆ ಕುರಿಗಳಂತೆ ಬಲಿಬಿಳಲು ರಣಯಜ್ಞಕ್ಕೆ ನುಗ್ಗುವಿರಿ !”

“ ಸುಳ್ಳು ! ನಮಗೆ ಅವಕಾಶಕೊಟ್ಟು ನೋಡಿರಿ, ನಾವೇನು ಮಾಡುವೆವೆಂಬುದನ್ನು ” ಎಂದು ಒಬ್ಬನು ಅರಚಿದ. ಉಳಿದವರೆಲ್ಲರೂ ಅವನಿಗೆ ದನಿಗೂಡಿಸಿದರು.

ಅವಳು ಪುನಃ ತಿರಸ್ಕಾರದಿಂದ ಅವರನ್ನು ನೋಡಿದಳು.

“ ವೀರೋಕ್ತಿಗಳು, ನಿಮ್ಮ ಕೃತಿಗಳು ಇನ್ನೂ ಕಲಿತನದ್ದಾಗ ಬಹುದಲ್ಲವೆ? ಏನು ಮಾಡುವಿರಿ ಸರಕಾರವನ್ನು ಉರುಳಿಸುವಿರಾ ? ಕೈಸರನನ್ನು ಪದಭ್ರಷ್ಟ ಮಾಡುವಿರಾ ? ಈ ನಿಮ್ಮ ದೇಶದಲ್ಲಿ ಸ್ವಾತಂತ್ರ್ಯವನ್ನೂ ನಾಗರಿಕ ಹಕ್ಕು ಬಾಧ್ಯತೆಗಳನ್ನೂ ಸ್ಥಾಪಿಸುವಿರಾ ? ಮಾತು, ಬರಿ ಮಾತು, ನಾಲ್ಕಾರು ಸೈನಿಕರನ್ನು ಕಂಡರೆ ಹೆದರಿ ಓಡುವಿರಿ ”

ಈ ಶಬ್ದಗಳಿಂದ ನೆರೆದವರ ಬೆನ್ನ ಮೇಲೆ ಬಾರಕೋಲಿ (ಚಮ್ಮಟಿಗೆ) ನಿಂದ ಸೆಳೆದಂತಾಯಿತು. ಅವಳು ಹೇಳಿದ್ದೆಲ್ಲ ನಿಜವಿದ್ದರೂ ಕಂಡದ್ದನಾಡಿದರೆ ಕೆಂಡದಂಥ ಸಿಟ್ಟು ಎಂಬಂತೆ ನೆರೆದವರೆಲ್ಲ ಕೆರಳಿ ಆ ಅಜ್ಞಾತ ಸ್ತ್ರೀಯ ಕಡೆಗೆ ಮುನ್ನುಗ್ಗಹತ್ತಿದರು. ಅಷ್ಟರಲ್ಲಿ ಒಬ್ಬನು ಮುನ್ನುಗ್ಗಿ ಬಾಕಿನ ಮೇಲೇರಿ ನಿಂತು ಕೂಗ ಹತ್ತಿದನು.

"ಕೇಳಿರಿ ಗೆಳೆಯರೆ, ಅವಳ ಅವಳು ಆಡಿದ ನಿಜ. ನಾವೆಲ್ಲ ಕುರಿಗಳಾಗಿದ್ದೇವೆ. ಆದರೆ ಕುರುಬನು ಜಾಣನಿದ್ದರೆ ಕುರಿಗಳೂ ಸರಿಯಾದ ದಾರಿಯನ್ನೇ ಹಿಡಿಯುವವು. ಆದ್ದರಿಂದ ನಮಗೆ ಶಾಂತಿಯ ದಾರಿತೋರಿಸಲು ಜಾಣ ಕುರುಬನನ್ನು ಹುಡುಕೋಣ. ಸಾಮ್ರಾಟನೂ ಅವನ ಸೈನ್ಯಬಲವೂ ನಮ್ಮನ್ನು ವಿನಾಶಕ್ಕೆಳೆಯುತ್ತಿವೆ. ಎಲ್ಲರ ಸಮಾನ ಸೌಕರ್ಯಗಳನ್ನು ಒಪ್ಪುವ ಮುಖಂಡನೊಬ್ಬನನ್ನು ಹುಡುಕಿಕೊಳ್ಳೋಣ. ಅವನನ್ನು ಸರಕಾರಕ್ಕೆ ಬಲಿಕೊಡದಂತೆ ನೋಡಿಕೊಳ್ಳೋಣ."

"ಅವನ ಮಾತು ಸರಿಯಾದದ್ದು, ಮುಖಂಡರನ್ನು ಆರಿಸೋಣ ಭಾವು, ಜಾನ ಭಾವು" ಎಂದು ಎಲ್ಲರೂ ಕೂಗಿದರು.

ಎಲ್ಲರ ಸುಖ ದುಃಖಗಳನ್ನು ತನ್ನವೆಂದು ಭಾವಿಸುತ್ತಿದ್ದ ಜಾನನು ಕೆಲಸಗಾರರಲ್ಲಿ ಬಹು ಪ್ರಿಯನಾಗಿದ್ದನು. ಆದ್ದರಿಂದಲೆ ನೆರೆದವರು ಅವನ್ನು ಶಾಂತರೀತಿಯಿಂದ ಕೇಳಿಕೊಂಡರು. ಆದರೆ ಇಂಥ ರಾಜದ್ರೋಹದ ಮಾತುಗಳನ್ನು ಕೇಳಿದ್ದಕ್ಕಾಗಿ ತಮ್ಮನ್ನೆಲ್ಲಿ ಪೋಲೀಸರು ಬಂಧಿಸಿ ಒಯ್ಯುವರೊ ಎಂದು ಪುಕ್ಕರು ಕೆಲವರು ಬೆದರುಗಣ್ಣಿಗಳಿಂದ ಸುತ್ತಲೂ ನೋಡುತ್ತಿದ್ದರು.

"ಗೆಳೆಯರೆ, ನೀವಿದನ್ನು ಓದಿರುವಿರಿ. ಸಾಮ್ರಾಟನು ನಮ್ಮ ದೇಶದಲ್ಲಿ ನೆತ್ತರಿನ ಹೊಳೆಯನ್ನು ಪುನಃ ಹರಿಸಬೇಕೆಂದಿದ್ದಾನೆ ನಾವಿದನ್ನು ಮೂಕ ಕುರಿಗಳಂತೆ ಸಹಿಸಬೇಕೆ?" ಎಂದು ಜಾನನು ಕೇಳಿದ.

"ಇಲ್ಲ ಇಲ್ಲ" ಎಂಬ ಉತ್ತರ ಬಂತು.

"ಮಹಾ ಯುದ್ಧದಲ್ಲಿ ಹಾಳಾದವರಾರು? ರಾಜಮನೆತನದವರೆ? ಅವರ ಕೂದಲು ಕೊಂಕಿದ್ದಾದರೂ ನೀವು ಕಂಡಿದ್ದಿರಾ? ಇಲ್ಲ. ಆದರೆ ನಾವು ನಮ್ಮ ಹೆಂಡಿರು ಮಕ್ಕಳು ಇಲ್ಲಿ ಉಪವಾಸ ಸಾಯುತ್ತಿರುವಾಗ ನಮ್ಮನ ಅಲ್ಲಿ ಕುರಿಗಳಂತೆ ಬಲಿಕೊಡಲಾಗುತ್ತಿತ್ತು. ಅಧಿಕಾರಿಗಳೂ ತಮ್ಮ ಐಷ ಆರಾಮದಲ್ಲಿಯೆ ಇದ್ದರು! ಪುನಃ ನೀವು ಮೋಸ ಹೋಗುವಿರಾ? ಈ ಹೆಣ್ಣು ಮಗಳು ಅಂದಂತೆ ನೀವು ಕುರಿಗಳಂತೆ ಅವರು ಒಯ್ದತ್ತ ಸಾಗುವಿರಾ? ಅಥವಾ ದೇಶದ ಅಭಿವೃದ್ಧಿಯನ್ನು ಸಾಧಿಸಿ ನಿಮ್ಮೆಲ್ಲರನ್ನು ಸುಖದಿಂದ ಆಳುವ ಮುಖಂಡನನ್ನು ಹುಡುಕಿಕೊಳ್ಳುವಿರಾ?"

"ಆ ಮುಖಂಡನೆಲ್ಲಿ ? ಅವನನ್ನು ಹುಡುಕೋಣ" ಎಂದು ಜನಜಂಗುಳಿ ಕೂಗಿತು.

ಜಾನನು ಸುತ್ತಲೂ ನೋಡಿದ. ದೂರದಲ್ಲಿ ಒಂದೆಡೆಗೆ ಕೆಲವು ಸೈನಿಕರೂ ಇನ್ನೊಂದೆಡೆಗೆ ಕೆಲವು ಪೋಲೀಸರೂ ಬರುತ್ತಿದ್ದುದು ಕಾಣಿಸಿತು. ಈ ಪರಿಸ್ಥಿತಿಯಲ್ಲಿ ಅವರು ಬಂದರೆ ಕೈಗೆಕೈ ಹತ್ತುವ ಪ್ರಸಂಗವೆಂದರಿತು.

"ಗೆಳೆಯರೆ, ನಿಮ್ಮ ಚಳವಳಿ ಇನ್ನೂ ಬಲಿತಿಲ್ಲ. ಸಕಾಲಕ್ಕೆ ಜರ್ಮನಿಯ ಉದ್ಧಾರಕನಾದ ನಿಮ್ಮ ಮುಖಂಡನು ಕಾಣಿಸಿಕೊಳ್ಳುವನು. ಆದರೆ ಈಗ ಪೋಲೀಸರು ಬರುವ ಮೊದಲೆ ಚದರಿ ಹೋಗಿರಿ, ತಡಮಾಡಬೇಡಿರಿ." ಎಂದು ಆಜ್ಞಾಪಿಸಿದ. ಅವನೂ ಬಾಕಿನ ಮೇಲಿಂದ ಜಿಗಿದು ವಿರುದ್ಧ ದಿಕ್ಕಿನಲ್ಲಿ ಪಲಾಯನ ಹೇಳಿದ. ಜನರೆಲ್ಲ ಗುಂಪುಗುಂಪಾಗಿ ಚದರಿದರು.

"ಏನು ನಡೆದಿತ್ತಿಲ್ಲಿ" ಎಂದು ಪೋಲೀಸ ಅಧಿಕಾರಿಯೊಬ್ಬನು ಇದುವರೆಗೆ ವೇದಿಕೆಯಾಗಿದ್ದ ಬಾಕಿನ ಮೇಲೆ ಸಿಗಾರೇಟು ಸೇದುತ್ತ ಕುಳಿತಿದ್ದ ತರುಣನನ್ನು ಪ್ರಶ್ನಿಸಿದ.

"ಓ, ಏನೂ ಇಲ್ಲ. ಎಂದಿನಂತೆ ಸಾಮ್ಯವಾದಿಗಳ ಗೊಂದಲ" ಎಂದು ಅನಾಸ್ಥೆಯಿಂದ ಉತ್ತರಿಸಿದ.

"ಈ ಸಾಮ್ಯವಾದಿಗಳು ಏನಾದರೂ ಬಡಬಡಿಸುತ್ತಿರುತ್ತಾರೆ. ಇವರ ಬೆನ್ನುಹತ್ತಿದರೆ ನಮ್ಮ ಕೆಲಸ ನಿಂತು ಹೋದೀತು. ಇಲ್ಲಿ ಮತ್ತೇನಾದರೂ ವಿಶೇಷವಿದೆಯೊ ಎಂದು ಬಂದಿದ್ದೆ" ಎಂದು ಹೊರಟ. ಆದರೆ ಅಲ್ಲಿಯೆ ಕೆಳಗೆ ಬಿದ್ದಿದ್ದ ಕರಪತ್ರಿಕೆಯೊಂದನ್ನು ನೋಡಿ ಎತ್ತಿಕೊಂಡು ಓದಿ ನೋಡಿದ.

"ಇನ್ನೊಂದು ಯುದ್ಧವಂತೆ, ಕೇಳಿರೊ ! ಈ ಕಳೆದ ಮಹಾಯುದ್ಧ ಸಾಕಾಗಿಲ್ಲವೇನೊ ? ಎಂಥ ಮೂರ್ಖರು ಇವರು ! ಏನೇ ಇರಲಿ, ಇದನ್ನು ವರದಿ ಮಾಡಬೇಕಾದುದು ನಮ್ಮ ಕರ್ತವ್ಯ" ಎಂದು ಅದನ್ನು ಜೇಬಿಗೆ ತುರಕಿಕೊಂಡ.

೯

" ಅಂತೂ ಯಶಸ್ವಿಯಾಯಿತೆನ್ನು "

" ನಮ್ಮ ನಿರೀಕ್ಷೆ ಮೀರಿ ಯಶಸ್ವಿಯಾಯಿತು. ಕರಪತ್ರಿಕೆಯು ಮಾಡಿದ ಚಮತ್ಕಾರವಂತೂ ಅದ್ಭುತ. ಜಾನ ಮತ್ತು ಆ ಹೆಣ್ಣುಮಗಳು ಗ್ರೇಟಾ ಸಮಯೋಚಿತವಾಗಿ ನಮ್ಮಾಜ್ಞೆಯಂತೆ ವರ್ತಿಸಿ ಹೊಸ ಮುಖಂಡನ ವಿಚಾರವನ್ನು ಎಲ್ಲಗಲ್ಲಿ ಬಿತ್ತಿದ್ದಾರೆ. ಜನರೆಲ್ಲ ಆ ಮುಖಂಡನ ಆಗಮನವನ್ನು ಆತುರದಿಂದ ನಿರೀಕ್ಷಿಸುತ್ತಿದ್ದಾರೆ. "

" ಇನ್ನೂ ಹೆಚ್ಚು ಕರಪತ್ರಗಳನ್ನು ಹಂಚಲು ನಮ್ಮ ಹಸ್ತಕರಿಗೆ ತಿಳಿಸಿದ್ದಾಯಿತೆ ? "

" ಈ ದೇಶದ ಪಟ್ಟಣಗಳಲ್ಲೆಲ್ಲ ನಮ್ಮ ಹಸ್ತಕರು ಆ ಕಾರ್ಯದಲ್ಲಿ ನಿರತರಾಗಿದ್ದಾರೆ. ಗಿರಣಿಗಳಲ್ಲಿ ಕಾರಖಾನೆಗಳಲ್ಲಿ ಎಲ್ಲೆಲ್ಲಿಯೂ ಅವರ ಕೈವಾಡ ಕಂಡುಬರುತ್ತಿದೆ. ಸಾಮ್ರಾಟನು ಇನ್ನೊಂದು ಯುದ್ಧದ ಸಿದ್ಧತೆ ನಡೆಸಿದ್ದಾನೆಂಬುದನ್ನು ಅರಿಯದ ಪಿಳ್ಳೆಯು ಇನ್ನೊಂದು ತಿಂಗಳಲ್ಲಿ ಹುಡುಕಿದರೂ ಸಿಗಲಾರದು. ನಮ್ಮ ಜನರು ಅವರೊಡನೆ ಕಾರಖಾನೆಗಳಲ್ಲಿ ದುಡಿಯುತ್ತ, ಅವರ ಆಟಪಾಟಗಳಲ್ಲಿ ಭಾಗಿಗಳಾಗುತ್ತ ಪ್ರತಿನಿತ್ಯ ಅವರ ಕಿವಿಗಳಲ್ಲಿ ಯುದ್ಧ ವಿರೋಧಿಯಾದ ಅವರ ಭಾವೀ ಮುಖಂಡನ ಹೆಸರನ್ನು ಉಚ್ಚರಿಸುತ್ತಿದ್ದಾರೆ. "

ರಾಜಕುಮಾರ ಈಟಲನು ಸಮಾಧಾನದಿಂದ ಗೋಣು ಹಾಕಿದ.

" ಭಾಪು ! ಸ್ಮಿಟ, ಅರ್ನಾಲ್ಡ ಮುಂತಾದವರ ವಿಚಾರವೇನು ? ನಮಗೆ ಅವರ ಅಗತ್ಯವೂ ಇದೆ " ಎಂದು ಈಟಲನು ವಿಚಾರಿಸಿದ.

" ಆಲಿಸಬೇಕು ಪ್ರಭೂ. ನಾನು ಲಿಪಝಿಗದಲ್ಲಿದ್ದಾಗ ವರ್ನರನ ಪ್ರಾಣಗಳನ್ನು ತರಬೇತಿಗೊಳಿಸುವ ಶಾಲೆಯೊಂದನ್ನು ಕಂಡುಹಿಡಿದೆ. ನಗರದಿಂದ ಸುಮಾರು ಮೂರು ಮೈಲು ದೂರದಲ್ಲಿದೆ ಅದು. ಡ್ರೆಸಡೆನದಲ್ಲಿಯ ನಮ್ಮ ಜನರಿಗೆ ಸೂಚನೆಗಳನ್ನೂ ಕೊಡಬೇಕೆಂದು ನಾನು ವಿಮಾನದಿಂದ ಲಿಪಝಿಗದಿಂದ ಹೊರಟು ತುಸು ದೂರ ಬಂದಾಗ ಅಲ್ಲಿ ಒಂದು ಕಟ್ಟಡವು

ಕಂಡಿತು. ಅಲ್ಲಿ ಎದುರಿನ ಬಯಲಿನಲ್ಲಿ ನಮ್ಮ ಸೈನಿಕರನ್ನು ಹೋಲದ ಕೆಲವು ತರುಣರು ಸೈನಿಕ ಶಿಕ್ಷಣ ಪಡೆಯುತ್ತಿದ್ದದ್ದು ಕಂಡು ಬಂತು. ಆದ್ದರಿಂದ ನಾನು ವಿಮಾನವನ್ನು ಕುಸುಮುಂದಕ್ಕೆ ಇಳಿಸಿ ಕುತೂಹಲದಿಂದ ಆ ಕಟ್ಟಡದ ಕಡೆಗೆ ತಿರುಗಿ ಬಂದೆ.

ಆದರೆ ಆ ಕಟ್ಟಡದ ಸುತ್ತಲೂ ತಂತೀಬೇಲಿಯನ್ನು ಹಾಕಿಸಲಾಗಿದೆಯಲ್ಲದೆ ಇಪ್ಪತ್ತು ಗಜ ಅಂತರಕ್ಕೊಬ್ಬನಂತೆ ಕಾವಲುಗಾರರನ್ನು ಇಡಲಾಗಿದೆ. ಒಳಗೆ ಬಯಲಿನಲ್ಲಿ ಸುಮಾರು ಐನೂರು ತರುಣರು ನಟನೆಯ ಯುದ್ಧದಲ್ಲಿ ತೊಡಗಿದ್ದರು. ಆ ತರುಣರು ನಮ್ಮಂತೆ ಇರದೆ ಭೀಮಕಾಯರಾಗಿದ್ದರು. ಆದ್ದರಿಂದ ನನಗೆ ಸಂದೇಹ ಬಂದಿತು. ಅಂದು ನಾನು ಲಿಪಯ್ಯಿಗಕ್ಕೆ ಮರಳಿ ನನ್ನ ಸಂಗಡಿಗರಿಗೆ ಆ ಕಟ್ಟಡದ ಗುರುತುಗಳನ್ನೆಲ್ಲ ಹೇಳಿ ಹೆಚ್ಚಿನ ಶೋಧ ನಡೆಸಲು ತಿಳಿಸಿದೆ. ನನ್ನ ಸಂದೇಹ ನಿಜವೆಂದು ಮರುದಿನವೇ ನನಗೆ ಖಂಡಿತವಾಯಿತು. ಅದು .ವರ್ನರನ ಪ್ರಾಣಿಗಳ ತರಬೇತಿ ಶಾಲೆಗಳಲ್ಲಿ ಒಂದು; ಅವರನ್ನು ಬಾಲಕರಿದ್ದಾಗಲೆ ಅಲ್ಲಿಗೆ ತರಲಾಗುತ್ತಿದ್ದು ಮುಂದೆ ಹದಿನೇಳನೇ ವಯಸ್ಸಿಗೇ ಸೈನ್ಯದಲ್ಲಿ ಸೇರಿಸಿಕೊಳ್ಳಲಾಗುತ್ತಿದೆ. ಆ ಶಾಲೆಯ ಸುತ್ತಲಿನ ಹಳ್ಳಿಗರು ಇವರ ಕ್ರೂರಕೃತ್ಯಗಳಿಗಾಗಿ ಬೇಸತ್ತು ಹೋಗಿದ್ದಾರೆ. ಆ ಪ್ರಾಣಿಗಳಿಗೆ ನೀತಿನಿಬಂಧನೆಗಳೇ ಇಲ್ಲ. ಬಂದೂಕು, ಚಮ್ಮಟಿಗೆಗಳಿಲ್ಲದೆ ಅವರು ದಾರಿಗೇ ಬರುವಂತಿಲ್ಲ. ಅವರೊಡನೆ ವ್ಯವಹರಿಸುವದೆಂದರೇನು ಎಂಬುದನ್ನು ತಾವೇ ಊಹಿಸಬೇಕು.'' ಎಂದು ಸ್ಮಿಟನು ಮಾತುನಿಲ್ಲಿಸಿ ಈಟಲನ ಮುಖ ನೋಡಿದನು.

'' ಆ ಕಾವಲುಗಾರರಲ್ಲಿ ಕೆಲವರನ್ನು ಒಡೆದುಕೊಳ್ಳಬೇಕು. ಆ ಪ್ರಾಣಿಗಳಲ್ಲಿ ಅಸಂತೋಷವನ್ನು ಬಿತ್ತಬೇಕಾದರೆ ಅವರಿಗೆ ಸ್ವಾತಂತ್ರ್ಯ, ಸುಖವನ್ನು ಬಣ್ಣಿಸಿ ಬರ್ಲಿನದ ಐಷಆರಾಮದ ಆಮಿಷ ತೋರಿಸಬೇಕು" ಎಂದು ಈಟಲನು ಯುಕ್ತಿ ಸೂಚಿಸಿದ.

'' ಹೌದು ಪ್ರಭೂ, ನಾನೂ ಹಾಗೇ ವಿಚಾರ ಮಾಡಿದ್ದೇನೆ. ಆದರೆ ಇವರನ್ನು ಸ್ವಚ್ಛಂದವಾಗಿ ಬಿಟ್ಟುಕೊಡುವದುಚಿತವೇ? "

" ಇಲ್ಲ. ಹಾಗೆ ಹೇಳಲು ನಾನೇನು ಹುಚ್ಚನೆಂದೆಣಿಸಿದೆಯಾ? ಸಮಯ ಬಂದಾಗ, ಅವರನ್ನು ಬರ್ಲಿನದ ವರೆಗೆ ಒಯ್ಯುವ ತನಕ ನಮ್ಮ ಅಧೀನದಲ್ಲಿಟ್ಟುಕೊಳ್ಳೋಣ. ನಂತರ ಅವರೆಸಗಬಹುದಾದ ಅತ್ಯಾಚಾರ ಗಳನ್ನು ಸಂಪೂರ್ಣವಾಗಿ ಅರಿತುಕೊಂಡೇ ಆರ್ನಾಲ್ಡನ ನೇತೃತ್ವದಲ್ಲಿ ಅವರನ್ನು ಪಂಜರದಿಂದ ಹೊರಗೆ ಬಿಟ್ಟುಬಿಡೋಣ "

" ಆರ್ನಾಲ್ಡ ಹಾರ್ಟವೆಗನನ್ನು ಒಲಿಸಿಕೊಳ್ಳುವದು ಸಾಧ್ಯವೆ? ಯುವರಾಜನೂ ಅವನೂ ಸ್ನೇಹಿತರಾಗಿದ್ದಾರೆ ? " ಎಂದು ಸ್ಮಿಟನು ಸಂದೇಹ ದಿಂದ ಕೇಳಿದ.

" ಹೆಂಗಸಿನ ವಿಷಯ ಬಂದ ಕೂಡಲೆ ಎಂಥ ಸ್ನೇಹವೂ ಮಣ್ಣು ಗೂಡುತ್ತದೆಂಬುದು ನಿನಗೆ ಗೊತ್ತಿಲ್ಲವೆಂದು ತೋರುತ್ತದೆ " ಎಂದು ಈಟಲನು ಮುಗುಳ್ನಗೆ ಸೂಚಿಸಿದ.

" ಹೆಂಗಸು! ಆರ್ನಾಲ್ಡನು ಹೆಂಗಸಿನ ಬಲೆಯಲ್ಲಿ ಬೀಳುವದು ಸಾಧ್ಯವೇ ಇಲ್ಲ. ಯುವರಾಜರು ಮಾತ್ರ ಬಲಿಬೀಳಬಹುದು. ಆರ್ನಾಲ್ಡನ ಅನಾಸಕ್ತಿ ಜಗಜ್ಜಾಹೀರವಾಗಿದೆ. ಯುವರಾಜರ ಸ್ನೇಹಿತನಾದ್ದರೂ ಅವನು ಯಾವ ಹೆಂಗಸಿನ ಬಲೆಗೆ ಬಿದ್ದವನಲ್ಲ. "

" ಜರ್ಮನಿಯ ಪತ್ತೇದಾರಿ ಶಾಖೆಯಲ್ಲಿಯೇ ನೀನು ಚತುರನಾಗಿ ದ್ದರೂ ನಿನಗೆ ಕಲ್ಪಿಸಲಾಗದ ಅನೇಕ ಸಂಗತಿಗಳೂ ಇವೆ " ಎಂದು ಈಟಲನು ನಕ್ಕನು.

## ೧೦

ಆರ್ನಾಲ್ಡ ಹಾರ್ಟವೆಗನು ಆಯಾಸದಿಂದ ಬಳಲಿದವನಾಗಿ ವಿರಾಮಾ ಸದಲ್ಲಿ ಬಿದ್ದುಕೊಂಡನು. ಹೊಸದಾಗಿ ಸೈನ್ಯದಲ್ಲಿ ಸೇರಿಸಿಕೊಂಡು ತರುಣರಿಗೆ ಕೊಡುತ್ತಿರುವ ಶಿಕ್ಷಣದ ಮೇಲ್ವಿಚಾರಣೆಯನ್ನು ಕಳೆದ ಹದಿನೈದು ದಿನಗಳಿಂದ ಹೊತ್ತು ಇವನು ಬಸವಳಿದು ಹೋಗಿದ್ದನು. ಕೆಲಸಕ್ಕೆ ಬೇಸತ್ತಿದನೆಂದಲ್ಲ—ಆದರೆ ಸೈನ್ಯದಲ್ಲಿ ಬಂದಿದ್ದ ಈ ತರುಣರು

ದೇಶದಲ್ಲಿಯ ಸಾಮಾನ್ಯ ತರುಣರಿಗಿಂತ ತೀರ ಬೇರೆಯಾಗಿದ್ದರು. ಅವರಿಗೆ ಬುದ್ಧಿಯೆ ಇದ್ದಂತೆ ತೋರಲಿಲ್ಲ. ಕ್ರೌರ್ಯದ ಮೂರ್ತಿಗಳಂತಿದ್ದ ಅವರನ್ನು ಕಂಡು ಅರ್ನಾಲ್ಡನು ಒಮ್ಮೊಮ್ಮೆ ಹತಪ್ರಭನಾಗುತ್ತಿದ್ದ.

ಈ ತರುಣರನ್ನು ಯಾವ ಪ್ರಾಂತದಿಂದ ಭರತಿ ಮಾಡಿಕೊಂಡಿರಬಹುದು ಎಂದು ಅವನು ಒಳಗಿಕೊಂಡಲ್ಲಿಯೇ ಆಲೋಚಿಸುತ್ತಿದ್ದ. ಎದ್ದು ಮೇಜಿನ ಮೇಲಿನ ಸಿಗಾರೇಟು ತೆಗೆದುಕೊಳ್ಳುರುವಾಗ ಅವನಲ್ಲಿ ಹೊಸ ವಿಚಾರವೇ ಸುಳಿಯಿತು. ಬೊಹೋಮಿಯಾದ ರಾಯಭಾರಿ ಕಚೇರಿಯಲ್ಲಿ ಇಂದು ಸ್ವಾಗತ ಸಮಾರಂಭವಿದ್ದು ಎಲ್ಸಾಳು ಅಲ್ಲಿಗೆ ಬರುವಳು. ಅಂದು ತೋಟದಲ್ಲಿ ಅವಳನ್ನು ನುಡಿಸಿದಂದಿನಿಂದ ಇಂದಿನವರೆಗೆ ಅವಳೊಡನೆ ಒಂದು ಮಾತನ್ನಾದರೂ ಆಡಲು ಅವಕಾಶ ದೊರೆತಿರಲಿಲ್ಲ. ಅವಳು ಇತರ ತರುಣ ಅಧಿಕಾರಿಗಳೊಡನೆ ಪ್ರಣಯಾಲಾಪಗಳನ್ನು ಸ್ವೇಚ್ಛೇಯಿಂದ ನಡೆಸುತ್ತಿದ್ದರೂ ತನ್ನನ್ನು ಮಾತ್ರ ತಪ್ಪಿಸುತ್ತಿದ್ದಳು. ಹುಚ್ಚಿ ! ತನ್ನಲ್ಲಿ ಅಸೂಯೆಯನ್ನು ಹುಟ್ಟಿಸಲು ಪ್ರಯತ್ನಿಸುತ್ತಿದ್ದಳು. ಅವಳ ಈ ವಿಚಾರಕ್ಕಾಗಿ ನಗು ಬಂತು ಅವನಿಗೆ ! ನಾನೇಕೆ ಯುವರಾಜನು ಕೂಡ—ಕೂಡಲೆ ಅವನ ವಿಚಾರ ಚಕ್ರ ಬೇರೆ ದಾರಿ ಹಿಡಿಯಿತು.

ಇದು ಅಸಹ್ಯ. ಈ ಅನಿಶ್ಚಿತತೆ ಇನ್ನು ಸಾಕು. ಅವಳ ನನ್ನವಳು ಎಂಬುದನ್ನು ಅವಳು ಮರೆಯಕೂಡದು. ಆದರೆ ದುರ್ದೈವದಿಂದ ಅವಳು ಸಾಮ್ರಾಟರ ಪರಿವಾರ ವರ್ಗದವಳಾಗಿದ್ದರಿಂದ ಅವಳನ್ನು ಹೊಂದಬೇಕಾದರೆ ವಿವಾಹದ ಹೊರತು ಬೇರೆ ದಾರಿಯೆ ಇಲ್ಲವೆಂಬುದು ಅವನಿಗೆ ಖಂಡಿತವಾಗಿತ್ತು. ಈ ಮದುವೆಯೆಂದರೆ ತಾನೂ ಸ್ವಲ್ಪ ತ್ಯಾಗ ಮಾಡಬೇಕಾಗುವದು. ಆದರೇನು, ಅವಳು ಬರ್ಲಿನದ ಮೋಹಿನಿಯಾಗಿದ್ದಾಳೆ. ವಿವಾಹ ಬಂಧನವೂ ಅಷ್ಟೊಂದು ತ್ರಾಸದಾಯಕವಾಗಲಾರದು.

ಮುಂದೆ ಒಂದು ತಾಸಿನಲ್ಲಿಯೆ ಅವನು ಬೊಹೋಮಿಯಾದ ರಾಯಭಾರಿಯ ನೃತ್ಯಾಗಾರದಲ್ಲಿದ್ದನು. ಕಣ್ಣೆದುರಿನ ವಿವಿಧ ಉತ್ತೇಜಕ ನೋಟಗಳನ್ನು ಅನಾಸ್ಥೆಯಿಂದ ನಿರೀಕ್ಷಿಸುತ್ತಿದ್ದ. ಅಷ್ಟರಲ್ಲಿಯೆ ಝೆಕ ಅಧಿಕಾರಿಯೊಡನೆ ನರ್ತಿಸುತ್ತಿದ್ದ ಚಲುವೆಯೊಬ್ಬಳು ಇವನ ಹತ್ತರ ನುಸುಳಿ ಹೋದಳು.

"ಏನು ಇಂದು ನರ್ತಿಸುವದಿಲ್ಲವೆ ಅರ್ನಾಲ್ಡ" ಎಂದು ಅವನನ್ನು ಮೃದುವಾಗಿ ತಟ್ಟಿ, ಕೇಳಿದಳು.

"ಇಲ್ಲೆಂದು ತೋರುತ್ತದೆ. ತಡಮಾಡಿ ಬಂದಿದ್ದರಿಂದ ನಿನ್ನೊಡನೆ ನರ್ತಿಸುವ ಭಾಗ್ಯವಿಂದು ದೊರೆಯಲಾರದೆಂದು ತೋರುತ್ತದೆ. ಆದ್ದರಿಂದ...."

"ಏನೂ ಅಡ್ಡಿಯಿಲ್ಲ. ಇನ್ನೊಂದು ಸಲ ನೀನು ಬೇಗನೆ ಬಂದು ನಯದಿಂದ ವಿಚಾರಿಸಿದೆಯಾದರೆ ನಿನ್ನೊಡನೆಯೂ ಒಂದಾವರ್ತಿ ಕುಣಿಯುವೆನು." ಎಂದು ಅವಳು ಕೊಂಕು ನೋಟವೊಂದನ್ನು ಬೀರಿ ಮುಂದೆ ಸಾಗಿದಳು.

"ಏನು ಅರ್ನಾಲ್ಡ ಏನು ಸುದ್ದಿ ? ವಿಚಾರದಲ್ಲಿದ್ದಂತಿದೆ ?" ಎಂದು ಯಾರೊ ಚಪ್ಪರಿಸಿ ಕೇಳಿದಂತಾಯಿತು. ಅವನು ತಿರುಗಿ ನೋಡಿದರೆ ಹಾನ್ಸ ಮೆಸ್ಸಿಂಗನು ಅಲ್ಲಿ ನಿಂತಿದ್ದ.

"ಯಾವ ವಿಚಾರವೂ ಇಲ್ಲ. ಆದರೆ ಬೇಸರ ಬಂದಂತಿದೆ, ನೀರಸ ಜೀವನ ಸಾಕಾಯಿತು."

"ಬಯಸಿದ್ದೆಲ್ಲ ಬಂದು ಮುಂದೆ ಬೀಳುವ ನಿನಗೇಕೊ ಈ ಬೇಸರ. ಇರಲಿ, ಲಿಪಝಿಗದ ಸುದ್ದಿಯನ್ನು ಕೇಳಿದ್ದೀಯಾ? "

"ಇಲ್ಲ, ಏನದು ?"

ಆದರೆ ನೃತ್ಯಾಗಾರದ ಆಚೇ ತುದಿಗೆ ಯುವರಾಜನಿಗೆ ಅತುಕೊಂಡು ನಿಂತಿದ್ದ ಎಲ್ಸಾಳನ್ನು ದೃಷ್ಟಿಸಿದ ಇವನು ಹಾನ್ಸನ ಮಾತುಗಳನ್ನು ಕೇಳುತ್ತಿರಲಿಲ್ಲೆಂದೇ ಹೇಳಬಹುದು.

"ಸದ್ಯದ ಸರಕಾರ ಮತ್ತು ಸೈನ್ಯ ಶಾಖೆಯನ್ನು ಪ್ರತಿಭಟಿಸಿ ಲಿಪಝಿಗದ ಸಾಮ್ಯವಾದಿಗಳು ಮೆರವಣಿಗೆ ಹೊರಡಿಸಿದರಂತೆ. ಸಾಮ್ರಾಟರಲ್ಲಿ ದ್ರೋಹ ವ್ಯಕ್ತಪಡಿಸುವ ಘೋಷಗಳನ್ನು ಮಾಡಿದರಂತೆ." ಎಂದು ಹ್ಯಾನ್ಸನು ಕೆಳದನಿಯಲ್ಲಿ ತಿಳಿಸಿದ.

"ಸಾಮ್ಯವಾದಿಗಳ ಬಡಬಡಿಕೆ ಹಾಗೇ ನಡೆದಿರುತ್ತವೆ. ಇನ್ನು ಈ ಜನತೆಯನ್ನು ಕೆಲವು ಬಂದೂಕುಗಳನ್ನು ತೋರಿಸಿ ದಾರಿಗೆ ತರಬಹುದು." ಎಂದು ನಕ್ಕು ನುಡಿದ.

"ಆದರೆ ಈ ಸಲದ ಪ್ರಸಂಗ ಗಂಭೀರವಿದ್ದಂತೆ ತೋರುತ್ತದೆ. ಕೋನಿಗ್ಜಬರ್ಗ, ಡ್ಯಾಂಝಿಗಗಳಲ್ಲಿಯೂ ಸಾಮ್ರಾಟ ವಿರೋಧಿ ಮತ ಪ್ರದರ್ಶಗಳು ನಡೆದಿವೆಯಂತೆ !"

ಛೀ ಎಂದ ಅರ್ನಾಲ್ಡ. ಹಾನ್ಸನ ಮಾತುಗಳನ್ನು ಅವನು ಕೇಳುತ್ತಲೇ ಇರಲಿಲ್ಲ. ಯುವರಾಜ ಮತ್ತು ಎಲ್ಸಾಳಲ್ಲಿ ಅವನ ನೋಟ ಕೀಲಿಸಿತ್ತು. ಒಡೆತನದ ಭಾವದಿಂದ ಅವಳನ್ನು ನಿರೀಕ್ಷಿಸುತ್ತಿದ್ದ ಅವನು ಕೋಪಾವಿಷ್ಟನಾದ. ಮುಷ್ಟಿಗಳನ್ನು ಬಿಗಿದುಕೊಂಡೇ ಅವರ ಕಡೆಗೆ ಸಾಗಿಲಿದ್ದ. ಆದರೆ ಯುವರಾಜನು ಅವಳೊಡನೆ ಮಾತಾಡುತ್ತಿರುವಾಗ ತಾನು ಎಲ್ಸಾಳಿಗೆ ತೊಂದರೆ ಕೊಡುವದು ಅವಿನಯವೆಂದು ಅವನು ಸುಮ್ಮನಿದ್ದ. ತಾನು ಯುವರಾಜನ ಆಪ್ತಸ್ನೇಹಿತನಾಗಿದ್ದರೂ ಈ ಸಂಪ್ರದಾಯವನ್ನು ಮುರಿಯುವ ಧೈರ್ಯ ಅವನಿಗಾಗಲಿಲ್ಲ. ಆದ್ದರಿಂದ ಆದಷ್ಟು ತನ್ನ ಮನಸ್ಸನ್ನೇ ನಿಗ್ರಹಿಸಿ ಹಾನ್ಸನು ಹೇಳುತ್ತಿದುದನ್ನು ಕೇಳುವಂತೆ ನಟಿಸಿದ. ಇಷ್ಟರಲ್ಲಿಯೆ ಬೇರೆ ಇಬ್ಬರು ಮೂವರು ಅಧಿಕಾರಿಗಳು ಅಲ್ಲಿ ಬಂದು ಸೇರಿದ್ದರು.

"ಈ ಮೆರವಣಿಗೆಗಳಿಗೆ ಕಾರಣವೇನಿರಬಹುದು? ಒಂದು ತಿಂಗಳ ಹಿಂದೆ ಯುವರಾಜರೊಡನೆ ನಾನು ಲಿಪಝಿಗಕ್ಕೆ ಹೋದಾಗ ನಗರದಲ್ಲಿ ಅತ್ಯಂತ ಶಾಂತ ವಾತಾವರಣವಿತ್ತು." ಎಂದು ಒಬ್ಬ ಅಧಿಕಾರಿ ನುಡಿದ.

"ಕಾರಣವೇನೋ ಯಾರಿಗೂ ತಿಳಿದಿಲ್ಲ. ಆದರೆ ಯುದ್ಧ ಭೀತಿಯು ಕಾರಣವೆಂದು ಆರ್ಸೀಮನು ಹೇಳುತ್ತಿದ್ದ." ಎಂದು ಹಾನ್ಸನ ಉತ್ತರ.

"ಆ ಸುದ್ದಿ ನಿಜವಾಗಲೆಂದು ನಾನು ದೇವರಿಗೆ ಬೇಡಿಕೊಳ್ಳುತ್ತೇನೆ." ಎಂದು ಅರ್ನಾಲ್ಡನು ಒಮ್ಮೆಲೆ ನುಡಿದ. ಯುದ್ಧವೆಂಬ ಶಬ್ದವು ಕಿವಿಗೆ ಬಿದ್ದೊಡನೆ ಅವನಲ್ಲಿಯ ರಕ್ತಪಿಪಾಸೆ ಹಠಾತ್ತಾಗಿ ಪ್ರಕಟವಾಯಿತು.

"ತಾಳಿಕೊಳ್ಳು, ಮಗು. ಯುದ್ಧವೆಂದರೇನೆಂಬುದನ್ನು ನೀನು ಅರಿತಿಲ್ಲ. ನಾವು ಇನ್ನೊಂದು ಯುದ್ಧವನ್ನು ಕಾಣದಿರೋಣ ಎಂದು ದೇವರಲ್ಲಿ ಪ್ರಾರ್ಥಿಸೋಣ" ಎಂದು ಹಿರಿಯ ಸೇನಾಧಿಕಾರಿಯೊಬ್ಬನು ನುಡಿದ. ಅವನ ಎದೆಯ ಮೇಲಿನ ಪದಕಗಳನ್ನೂ ತಾರೆಗಳನ್ನೂ ನೋಡಿದರೆ ಅವನೊಬ್ಬ ದಂಡನಾಯಕನೆಂದು ಸಹಜವಾಗಿ ಗುರುತಿಸಬಹುದಾಗಿತ್ತು.

" ಲಿಪಝಿಗದ ಸುದ್ದಿ ಮಾತ್ರಾಡುತ್ತಿದ್ದವಷ್ಟೆ ಜನರಲ. ಜನರಲ್ಲಿ ಪುನಃ ಯುದ್ಧಭೀತಿ ತಲೆದೋರಿದೆಂದು ಹಾನ್ಸನು ಹೇಳಿದನು " ಎಂದು ಆ ಅಧಿಕಾರಿ ನುಡಿದ.

" ಇಂಥ ಸುದ್ದಿಗಳನ್ನು ಹಬ್ಬಿಸಲು ಕುಚೋದ್ಯಗಾರರು ಸದಾ ಸಿದ್ಧರಿರುತ್ತಾರೆ ಸೈನ್ಯ ಶಾಖೆಯಲ್ಲಿ ಐದು ವರ್ಷ ಸೇವೆ ಸಲ್ಲಿಸಬೇಕೆಂಬ ಹೊಸ ಆಜ್ಞೆಯಿಂದ ವಾತಾವರಣ ಸ್ವಲ್ಪ ಪ್ರಕ್ಷುಬ್ಧವಾಗಿದೆ. ಇಬ್ಬರು ಮೂವರನ್ನು ಬಂಧಿಸಿದರೆ ತೀರಿತು, ಎಲ್ಲವೂ ಶಾಂತವಾಗುವದು. ಒಳ್ಳೇದು " ಎಂದು ಆ ದಂಡನಾಯಕನು ಹೊರಟು ಹೋದನು.

ತನ್ನ ಮಿತ್ರರಿಂದ ಬಿಡುಗಡೆ ಹೊಂದಿದ ಕೂಡಲೆ ಅರ್ನಾಲ್ಡನು ತೆರೆಯ ಮರೆಯಲ್ಲಿಯ ಕೋಣೆಯೊಂದನ್ನು ಪ್ರವೇಶಿಸಿದ. ಕೆಲ ನಿಮಿಷಗಳ ಪೂರ್ವದಲ್ಲಿ ಎಲ್ಸಾ ಅಲ್ಲಿ ಹೋಗಿದ್ದಳು.

ಇವನು ಆ ಕೋಣೆಯನ್ನು ಪ್ರವೇಶಿಸುತ್ತಿದ್ದಂತೆ ಒಬ್ಬ ಲೆಫ್ಟನಂಟನು ಹೊರಬಿದ್ದ. ಅರ್ನಾಲ್ಡನನ್ನು ಕಂಡು ನಿಂತು ವಂದನೆ ಅರ್ಪಿಸಿ ಎಲ್ಸಾಳಿಗೆ ಉಪಹಾರ ತರುವದಕ್ಕಾಗಿ ಹೋಗುತ್ತಿದ್ದೇನೆಂದು ತಿಳಿಸಿ ಪಾರಾದ. ಅರ್ನಾಲ್ಡನು ಬಂದದ್ದನ್ನು ಕಂಡು ಎಲ್ಸಾಳ ಮುಖ ಬಿಳುಪೇರಿತು. ಆದರೂ ಒತ್ತಾಯದ ಮುಗುಳ್ನಗೆಯಿಂದ ಅವನಿಗೆ ಕೈನೀಡಿದಳು.

" ನೀನು ಈಗ ಬಂದೆಯಾ ಅರ್ನಾಲ್ಡ ? ನೀನಿಲ್ಲಿಗೆ ಬರಬಹುದೆಂದು ನನಗನಿಸಿರಲಿಲ್ಲ. ನನಗಿಂದು ಅವಕಾಶವಿಲ್ಲ" ಎಂದು ಹೆದರಿಕೊಂಡಂತೆ ಹೇಳಿದಳು.

ಅವಳ ಚಾಚಿದ ಹಸ್ತವನ್ನು ಅವನು ಪರಿಗ್ರಹಿಸದೆ ಅವಳನ್ನೇ ನೋಡುತ್ತ ನಿಂತ. ಅವಳನ್ನು ಹಠಾತ್ತಾಗಿ ಬಾಹುಪಾಶಗಳಲ್ಲಿ ಬಿಗಿದು ಭಾವೋದ್ರೇಕದಿಂದ ಅವಳ ಮೇಲೆ ಚುಂಬನಗಳ ಸುರಿಮಳೆಗರೆದ.

" ಅರ್ನಾಲ್ಡ ! ಅರ್ನಾಲ್ಡ ! ತೊಲಗು " ಎಂದು ಆಯಾಸದಿಂದ ನುಡಿದಳಷ್ಟೆ. ಆದರೆ ಅಂದು ಹಾರ್ಜದ ಕಾಡಿನಲ್ಲಿ ಉದ್ದೀಪ್ತವಾದ ಸ್ತ್ರೀತ್ವವೇ ಇಂದೂ ಪುನಃ ಅವಳನ್ನು ಆವರಿಸಿದ್ದರಿಂದ ಬಾಹ್ಯಪ್ರಜ್ಞಾಶೂನ್ಯಳಾದಳು.

" ಪ್ರಿಯಕರಾ ! ನಾನು ನಿನ್ನನೆಷ್ಟು ಪ್ರೀತಿಸುತ್ತೇನೆ " ಎಂದು ಅವಳು ಅವನ ಗಾಢಾಲಿಂಗನದಲ್ಲಿಯೆ ಉಳಿದಳು.

" ಇದು ಸಾಕಾಯಿತು. ದಿನಕ್ಕೊಬ್ಬನೊಡನೆ ನೀನು ಪ್ರಣಯಾಲಾಪ ನಡೆಸುವದು ನನಗೆ ಸರಿಬರುವದಿಲ್ಲ. ನಾನು ನಮ್ಮ ವಿವಾಹಕ್ಕೆ ನಾಳೆಯೆ ಸಾಮ್ರಾಟರ ಅನುಮತಿಯನ್ನು ಕೇಳುವೆನು "

" ಆದರೆ ನಾನು ಒಪ್ಪಲಿಲ್ಲವೆಂದರೆ— ? " ಎಂದು ಅವಳು ಮೃದುವಾಗಿ ಅವನ ಆಲಿಂಗನದಿಂದ ಬಿಡುಗಡೆ ಹೊಂದಿದಳು. ತನ್ನ ಬಗ್ಗೆ ಇವನಲ್ಲಿ ಇಷ್ಟು ಉದ್ರೇಕವುಂಟಾದದ್ದು ಕಂಡು ಅವಳಿಗೆ ಸಂಭ್ರಮವಾಯಿತು. ಚೆಂದುಟಿಗಳ ಕೊನೆಗಳಲ್ಲಿ ಮುಗುಳ್ನಗೆ ಮಿಂಚುತ್ತಿತ್ತು. ಕೆಲ ನಿಮಿಷ ಅವನೊಡನೆ ಪ್ರಣಯ ಚೇಷ್ಟೆ ನಡೆಸಬೇಕೆಂದು ಅವಳಿಗೆನಿಸಿತು.

" ನಿನ್ನ ಮಾತು ಕೇಳುವರಾರು? " ಎಂದ ಅರ್ನಾಲ್ಡ. ಅವನ ಮುಖದಲ್ಲಿಯ ಉದ್ರೇಕವಳಿದು ಅಪೂರ್ವ ತೇಜ ಅವನಲ್ಲಿ ಮಿಂಚುತ್ತಿತ್ತು. ಅರ್ನಾಲ್ಡನು ಒಂದು ನಿಮಿಷ ಕಂಗೆಟ್ಟವನಾದ. ಆದರೆ ಮರುಕ್ಷಣದಲ್ಲಿಯೆ ಅವನಿಗೆ ಸತ್ಯದರ್ಶನವಾಯಿತು. ಈ ಇಪ್ಪತ್ತೈದು ವರ್ಷಗಳ ನಂತರ ಅವನ ತಾಯಿಯು ನೀಡಿದ ಬುದ್ಧಿ ಫಲಿಸಿದಂತಾಯಿತು. ವರ್ನರನು ವೆಂಟಾಳಲ್ಲಿಯ ಮಾನವ ಸಹಜವಾದ ಭಾವನೆಗಳನ್ನೆಲ್ಲ ನಿರ್ಮೂಲಗೊಳಿಸುವ ಪೂರ್ವದಲ್ಲಿ ಅವಳು ತನ್ನ ಬಸಿರಿನಲ್ಲಿದ್ದ ಮಗುವಿನಲ್ಲಿ ಬಿತ್ತಿದ ಪ್ರೇಮಬೀಜವಿಂದು ಸಫಲವಾಯಿತು.

" ನೀನು ನನ್ನನ್ನು ಒಪ್ಪದಿರಲಾರೆ. ಎಂದಿಗೂ ಸಾಧ್ಯವಿಲ್ಲ ಎಲ್ಸಾ. ನಾನು ನಿನ್ನನ್ನು ಪ್ರೀತಿಸುತ್ತೇನೆ "

## ೧೧

ರಾಜಕುಮಾರ ಈಟಲನು ಬರ್ಲಿನದಿಂದ ಕೆಲವು ಮೈಲು ದೂರದಲ್ಲಿದ್ದ ತನ್ನ ಮೃಗಯಾಪ್ರಾಸಾದದಲ್ಲಿ ಅಂದು ರಾತ್ರಿ ಸಂತೋಷಕೂಟವನ್ನೇರ್ಪಡಿಸಿದ್ದನು. ಕೆಲವೇ ವಿಶಿಷ್ಟ ಜನರಿಗೆ ಆಮಂತ್ರಣವಿತ್ತು ಆದರೆ

ಈಟಲನು ತನ್ನ ಅಣ್ಣನ ಮಗನಾದ ಯುವರಾಜ ವಿಲಿಯಂನನ್ನು ಆಮಂತ್ರಿಸಿದ್ದ. ಈಟಲನ ಸಮಾರಂಭಗಳೆಂದರೆ ಎಲ್ಲರಿಗೂ ಬಲು ಜೀವ ಬರ್ಲಿನದಲ್ಲಿಯ ಚಲುವೆಯರಿಗೆಲ್ಲ ಆಮಂತ್ರಣವಿರುತ್ತಿತ್ತು.

ಬಂದ ಅತಿಥಿಗಳೆಲ್ಲ ಅತ್ಯಮೂಲ್ಯವಾದ ವಸ್ತ್ರಾಭರಣಗಳನ್ನು ಧರಿಸಿದ್ದರು. ಊಟಕ್ಕಾಗಿ ಮಂಡಿಸಿದ್ದ ಮೇಜುಗಳ ಮೇಲೆ ರುಚಿರುಚಿಯಾದ ತಿಂಡಿ ತಿನಸುಗಳು ಆಕರ್ಷಕವಾಗಿ ಮಂಡಿಸಲ್ಪಟ್ಟಿದ್ದವು. ಸುರೆಗಂತೂ ಮುಕ್ತದ್ವಾರವಿತ್ತು. ಪಾಶ್ಚಾತ್ಯ ಪದ್ಧತಿಯ ಭೋಜನ ನಡೆದಂತೆ ಮನರಂಜನೆಗೂ ಅವಕಾಶವಿತ್ತು. ಅಂದರೆ ಸಮಾರಂಭದಲ್ಲಿ ಭಾಗಿಗಳಾದವರೆಲ್ಲರೂ ಸರತಿಯಂತೆ ಹಾಡನ್ನೋ, ಹಾಸ್ಯವನ್ನೊ, ಅನುಕರಣವನ್ನೋ ನೀಡುತ್ತಿದ್ದರು.

ಯಹೂದಿ ರಮಣಿಯು ತನ್ನ ಅರೇಬಿಯಾದ ನೃತ್ಯದ ಕಾರ್ಯಕ್ರಮವನ್ನು ಪ್ರಾರಂಭಿಸಿದಳು. ಮುದ್ದುಮುದ್ದಾದ ಅವಳ ಮಾಟ ಅಂಗಾಂಗಗಳು ಕುಣಿಯುತ್ತಿದ್ದಂತೆ ಯಾರನ್ನಾದರೂ ಉದ್ರೇಕಿಸುವಂತೆ ಆಕರ್ಷಕವಾಗಿ ಕಂಡವು. ನರ್ತನದ ಕಾವೇರಿದ ಅವಳು ಕೊನೆಗೆ ಯುವರಾಜರ ತೋಳ ತೆಕ್ಕೆಯಲ್ಲಿ ವಿಶ್ರಮಿಸಿದೊಡನೆ ನೆರೆದವರ ಕರತಾಡನೆಯಿಂದ ಕಿವಿಗಳು ಗಡಚಿಕ್ಕಿದವು.

" ನಮ್ಮ ವಿಲಿಗೆ ಇಂದೇನಾಗಿದೆ ? ಹೀಗೇಕೆ ಮೂಕಬಸವನಂತಿದ್ದಾನೆ ? " ಎಂದು ಅವಳು ಕೇಳಿದಳು.

" ಪ್ರೇಯಸಿಯ ಪ್ರೇಮಜಾಲದಲ್ಲಿ ಪ್ರಗಾಢವಾಗಿ ಬಂಧಿತನಾಗಿದ್ದಾನೆಂ " ದು ಪ್ಲೋಯಿಜನು ಬೆಕ್ಕಿನ ದನಿಯಲ್ಲಿ ಅಣಕದಿಂದ ಹೇಳಿದನು.

" ಇಲ್ಲ; ಓಪೆರಾದಲ್ಲಿಯ ಮೊನ್ನಿನ ನೃತ್ಯದ ನರ್ತಕಿಯನ್ನು ಕಂಡಾಗಿನಿಂದ ಅವನ ತಲೆ ತಿರುಗಿದೆ " ಎಂದು ಬ್ರಾಂಟನು ತನ್ನ ಸಂಗಾತಿಯ ತೋಳಿಗೆ ಒರಗಿ ಹೇಳಿದನು.

" ನೀವೆಲ್ಲ ಮೂರ್ಖರು ! ಪ್ರೇಮದ ಮಾತೇ ಇಲ್ಲ ನನ್ನಲ್ಲಿ. ನಿಮ್ಮಂತೆ ಕತ್ತೆಗಳ ಹಾಗೆ ಕುಣಿದಾಡಲು ನನಗೆ ಮನಸ್ಸಿಲ್ಲ" ಎಂದು ಯುವರಾಜ ವಿಲಿಯಂನು ನುಡಿದು ಗಹ ಗಹಿಸಿ ನಕ್ಕ.

" ಎಂದಿಗೂ ಸಾಧ್ಯವಿಲ್ಲ ಇಂಥ ಕಗ್ಗತ್ತಲ್ಲಿ " ಎಲ್ಲರೂ ತಿಳಿದಂತೆ ಆಡಿದರು.

" ಅಸಾಧ್ಯ! ಯುವರಾಜನಿಗೆ ಯಾವದು ಅಸಾಧ್ಯ ? ಮನಬಂದಂತೆ ನಾನು ನಡೆಯಲಾರೆನೆ ? " ಎಂದು ತೂಕತಪ್ಪಿ ಬೀಳಲಿದ್ದ ವಿಲಿಯಂನನ್ನು ಆ ರಮಣಿಯು ಎತ್ತಿ ಹಿಡಿದಳು. ರಾಜಕುಮಾರ ವಿಲಿಯಂನಲ್ಲಿ ಏನೋ ವಿಚಾರ ರೂಪುಗೊಳ್ಳುತ್ತಿದೆಂದು ಊಹಿಸಿದ ಈಟಲನು ಮೃದುವಾಗಿ ಕೇಳಿದ.

" ನಿನಗೆಲ್ಲಿಗೆ ಹೋಗಬೇಕಾಗಿದೆ ? ಮಧ್ಯರಾತ್ರಿ ಮೀರಿಹೋಗಿದೆ. ಈಗ ಬರ್ಲಿನಕ್ಕೆ ಹೋಗುವದೆಂದರೆ ಆ ವೇಳೆಯಲ್ಲಿ ಹೋದಂತೆ. ಅಲ್ಲದೆ ನಾಳೆ ರಾತ್ರಿಯ ವರೆಗೆ ನಾವಿಲ್ಲಿ ಇರಬೇಕೆಂದು ಮಾಡಿದ್ದೇವೆ "

" ಅದೇನೂ ಇಲ್ಲ ಹೊರಟೆ. ನಾನು ಎಲ್ಸಾಳ ಕಡೆಗೆ ಹೋಗ ಬೇಕಾಗಿದೆ "

ಈಟಲನು ಪ್ಲೊಯೆಜನ ಮುಖವನ್ನು ನಿರೀಕ್ಷಿಸಿದ. ಯುವರಾಜ ನಿಲ್ಲಿಂದ ಈಗ ಹೊರಟು ಹೋದರೆ ಏನಾದರೂ ಅನಾಹುತ ಸಂಭವಿಸೀತೆಂದು ಬಗೆದ. ಅಷ್ಟರಲ್ಲಿ ಏನೊ ವಿಚಾರ ಹೊಳೆದಂತಾಗಿ ವಿಲಿಯಂನ ಹತ್ತಿರ ಹೋಗಿ ಅವನನ್ನು ಆಸನದಲ್ಲಿ ಕುಳ್ಳಿರಿಸಿದ.

" ವಿಲಿ ಕೇಳು, ನೀನೀಗ ಹೋಗಲಾಗದು. ಹೀಗೆ ಮಾಡೋಣ. ನೀನು ಇಲ್ಲಿಯೆ ಉಳಿದರೆ ನಾಳೆ ಮಧ್ಯಾಹ್ನದೊಳಗಾಗಿ ಎಲ್ಸಾಳನ್ನು ಇಲ್ಲಿಗೆ ಕರೆತರುತ್ತೇನೆ "

" ಏನು " ಎಂದು ವಿಲಿಯಂ ಅಚ್ಚರಿಪಟ್ಟ "ಎಲ್ಸಾ ನೀವು ಅವಳನ್ನು ಇಷ್ಟು ಸುಲಭವಾಗಿ ಕರೆತರಲಾರಿರಿ "

" ಕೇಳು, ನಾಳೆ ಸಂಜೆ ಐದುಗಂಟೆಯೊಳಗಾಗಿ ಎಲ್ಸಾ ಒಬ್ಬಳೆ ಇಲ್ಲಿಗೆ ಬರುವಳೆಂದು ನಾನು ನಿನಗೆ ವಚನ ಕೊಡುತ್ತೇನೆ "

ನೆರೆದವರೆಲ್ಲ ಆಸ್ಥೆಯಿಂದ ನಿರೀಕ್ಷಿಸುತ್ತಿದ್ದರು. ಪ್ಲೊಯೆಜನೊಬ್ಬನಿಗೆ ಈ ಸಂಗತಿ ತಿಳಿದಿತ್ತು. ಆದ್ದರಿಂದ ಉಳಿದವರೆಲ್ಲ ದಿಙ್ಮೂಢರಾಗಿದ್ದರು. ಅಮಲೇರಿದ ಯುವರಾಜನು ಈಗ ಬರ್ಲಿನಕ್ಕೆ ಹಿಂತಿರುಗಬಾರದೆಂದೇ

ಈಟಲನು ಪ್ರಯತ್ನ ನಡೆಸಿದ್ದಾನೆಂದು ಅವರ ಭಾವನೆ. ಅದ್ದರಿಂದ ಸಾಮ್ರಾಟನ ಪರಿಚಾರಿಕೆಯನ್ನು ತಂದು ಕೊಡುವ ಆಶ್ವಾಸನವನ್ನು ಇವನು ಕೊಡುತ್ತಿದ್ದಾನೆಂದು ಅನಿಸಿತು. ವಿಲಿಯಂನೂ ಕ್ಷಣಹೊತ್ತು ಅನುಮಾನ ಪಟ್ಟ. ಆದರೆ ಅದೇಕೊ ತನ್ನ ಕಕ್ಕನನ್ನು ನಂಬಬೇಕೆನಿಸಿತು.

" ಒಳ್ಳೇದು. ನಾನು ಇಲ್ಲಿಯೆ ಇರುವೆ. ನಾಳೆ ಐದು ಗಂಟೆಗೆ ಅವಳನ್ನು ಕರೆತರಬೇಕು " ಎಂದು ಪುನಃ ವಿಲಿಯಂ ಆಲಿಂಗನದಲ್ಲಿ ಬೆರೆತು ಹೋದ.

* * * *

ಮರುದಿನ ಮುಂಜಾನೆ ಹತ್ತುಗಂಟೆಯ ಸುಮಾರಕ್ಕೆ ಈಟಲನು ಬರ್ಲಿನದಲ್ಲಿಯ ತನ್ನ ಭೋಗಿನಿ ಬ್ರಕರಾಣಿಯನ್ನು ಟೆಲಿಫೋನಿನಲ್ಲಿ ಕರೆದನು. ಬಹುದಿನಗಳಿಂದ ಇವನನ್ನೇ ನಂಬಿದ್ದ ಅವಳು ತಾನು ಇವನ ಪತ್ನಿಯೆಂದೇ ಹೇಳಿಕೊಳ್ಳುತ್ತಿದ್ದಳು.

" ಯಾರವರು ? " ಎಂದು ಅವಳು ಟೆಲಿಫೋನನ್ನು ಬೇಸರದಿಂದ ಎತ್ತಿಕೊಂಡಳ..

" ನಾನು, ಈಟಲ. ಚಿತ್ತಗೊಟ್ಟು ಕೇಳು ನನಗೀಗ ಸಮಯವಿಲ್ಲ. ನೀನು ಕೂಡಲೆ ಹೋಗಿ ರೋಜೆಂಬರ್ಗದ ರಾಣಿಯನ್ನು ಭೆಟ್ಟಿಯಾಗು. ಅವಳು ಊರಲಿಲ್ಲ. ನನಗೂ ತಿಳಿದಿದೆ. ಎಲ್ಸಾ ಸೀಬರ್ಟಳನ್ನು ಕರೆ. ಮಧ್ಯಾಹ್ನ ನಾಲ್ಕು ಗಂಟೆಗೆ ಅವಳನ್ನು ಕಾಫಿಗಾಗಿ ಆಮಂತ್ರಿಸಿ ಉಪವನದಲ್ಲಿಯ ಉಪಹಾರಗೃಹಕ್ಕೆ ಅವಳನ್ನು ಕರೆದುಕೊಂಡು ಬಾ. ನಾನು ಅಲ್ಲಿ ಬಂದಿರುತ್ತೇನೆ. ಏನು, ತಿಳಿಯಿತೆ ? " ಎಂದ.

" ಆಗಲಿ. ಎಲ್ಸಾ ಏಕೆ ಬೇಕಾದಳೊ ? ಅಂಥ ಮಹತ್ವದ ಕೆಲಸವೇನಿದೆ?" ಎಂದು ಆಶ್ಚರಿಯಿಂಡ ಕೇಳಿದಳು.

" ಈ ಕಾರ್ಯ ಸಿದ್ಧಿಸಿದರೆ ನಮ್ಮ ಆಕಾಂಕ್ಷೆ ಪೂರೈಸುವವು."

ಅಂದು ಮಧ್ಯಾಹ್ನದಲ್ಲಿ ಎಲ್ಸಾಳು ಬ್ರಕರಾಣಿಯೊಡನೆ ಮೃಗಯಾ ಪ್ರಾಸಾದಕ್ಕೆ ತೆರಳಿದಳು.

## ೧೨

ಅಂದು ಅರ್ನಾಲ್ಡನು ಕೆರಳಿ ಹೋಗಿದ್ದ. ಹೋದಲ್ಲೆಲ್ಲ ನಿರಾಶೆಯೆ. ಬೆಳಗಿನಲ್ಲಿ ಎದ್ದು ಅರಮನೆಗೆ ಹೋಗಿ ಸಾಮ್ರಾಟರ ಭೆಟ್ಟಿ ಕೋರಿದ್ದ. ಆದರೆ ಅವನನ್ನು ಅಲ್ಲಿ ಎರಡು ತಾಸು ಸುಮ್ಮನೆ ಕುಳ್ಳಿರಿಸಿ ಕೊಂಡನಂತರ ಸಾಮ್ರಾಟರಿಗೆ ಸ್ವಾಸ್ಥ್ಯವಿಲ್ಲ, ನಾಳಿನವರೆಗೆ ಅವರು ಯಾರನ್ನೂ ಭೆಟ್ಟಿಯಾಗಲಾರರು ಎಂದು ಹೇಳಿ ತಿರುಗಿ ಕಳಿಸಿಕೊಡಲಾಯಿತು. ನಂತರ ಭೋಜನ ತೀರಿಸಿ ಕೊಂಡು ರೋಜೆಂಬರ್ಗದ ರಾಣಿಯ ಮನೆಗೆ ಹೋದರೆ ಅವಳು ತನ್ನ ಮಗಳು ಹೆಡ್ವಿಗಳನ್ನು ಕರೆದುಕೊಂಡು ಎಲ್ಲಿಗೊ ಹೋಗಿ ಬಿಟ್ಟಿದ್ದಳು. ಎಲ್ಸಾಳನ್ನು ಹುಡುಕಿದರೆ ಅವಳೂ ಬ್ರಿಕರಾಣಿಯೊಡನೆ ಹೋಗಿದ್ದಾಳೆಂದು ತಿಳಿಯಿತು. ಮನಸಿನ ದುಗುಡವನ್ನು ಕಳೆದು ಕೊಳ್ಳಲೆಂದು ಕೆಲಹೊತ್ತು ತನ್ನ ಪ್ರೀತಿಯ ಕುದುರೆಯನ್ನೇರಿ ಓಡಾಡಿಬಂದ. ಆದರೂ ಸಮಾಧಾನವಾಗಲಿಲ್ಲ. ಎಲ್ಸಾಳ ವಿಯೋಗದಿಂದ ಅವನ ಮನಸು ವ್ಯಾಕುಲವಾಗಿತ್ತು.

ಅಷ್ಟರಲ್ಲಿ ಹ್ಯಾನ್ಸ ಮೆಸ್ಸಿಂಗನು ಅವಸರದಿಂದ ಬಂದ.

" ಇಂದಿನ ಸುದ್ದಿ ಕೇಳಿರುವಿಯಾ ಅರ್ನಾಲ್ಡ? ಸಾಮ್ರಾಟರ ವಿರೋಧಿಗಳು ಎಲ್ಲೆಲ್ಲಿಯೂ ದಂಗೆ ಎದ್ದಿದ್ದಾರೆ. ಬರ್ಲಿನದಲ್ಲಿಯೂ ಬೇಗನೆ ದಂಗೆ ಪ್ರಾರಂಭವಾಗಬಹುದು. ಅವರ ಚಳವಳಿ ಹಬ್ಬುತ್ತಿದೆ." ಎಂದ.

" ಛೀ, ಕೆಲವೇ ಸೈನಿಕರು ಅವರನ್ನು ಹತ್ತಿಕ್ಕಬಹುದು. ಇಂಥ ನಿಷ್ಫಲ ಪ್ರಯತ್ನಗಳು ಅನೇಕಸಲ ನಡೆದಿವೆ."

" ಹೌದು. ನನಗೂ ಗೊತ್ತು. ಆದರೆ ಈ ಸಲದ ಪ್ರಸಂಗ ಗಂಭೀರವಾಗಿದೆ. ಈ ಜನರನ್ನು ಹತ್ತಿಕ್ಕಲು ಫ್ರಾಂಕಫರ್ಟದಲ್ಲಿ ಸೈನಿಕರನ್ನು ನಿಯೋಜಿಸಲಾಯಿತು. ಆದರೆ ಜನರು ಆ ಸೈನಿಕರ ಮೇಲೆ ಕಲ್ಲೆಸೆದರು. ಗೋಳೀಬಾರಿಗೆ ಆಜ್ಞೆ ಕೊಡಲಾಗಿ ಆ ಜನರೂ ತಿರುಗಿ ಗುಂಡುಗಳನ್ನು ಹಾರಿಸಿದರು. ಅವರಿಗೆ ಎಲ್ಲಿಂದಲೊ ಶಸ್ತ್ರಾಸ್ತ್ರಗಳು ದೊರೆತಿವೆ. ಈ ಪರಿಸ್ಥಿತಿ ತೀರ ಗಂಭೀರವಾಗಿರುವದರಿಂದ ಇಂದು ಮುಂಜಾನೆ ರ್‍ಯಾಕಸ್ಟಾಗದ ವಿಶೇಷ ಸಭೆಯನ್ನು ಕರೆಯಲಾಗಿತ್ತು."

"ಅವರ ಕೆಲವು ಮುಖಂಡರನ್ನು ಬಂಧಿಸಿ ಗುಂಡಿಕ್ಕಿ ಕೊಂದರೆ ಎಲ್ಲವೂ ಶಾಂತವಾಗುವದು. ಈ ಕಿಡಿಗೇಡಿಗಳನ್ನು ಹತ್ತಿಕ್ಕಲು ಇದೊಂದೇ ಮಾರ್ಗ. ಹೋಗಲಿ. ಬಾ ಕುಳಿತುಕೊಳ್ಳು. ಸಿಗಾರೇಟ ತೆಗೆದುಕೋ, ನಾನೊಂದು ವಿಷಯ ಹೇಳಬೇಕೆಂದಿದ್ದೇನೆ. ನಾನು ಮದುವೆಯಾಗಬೇಕೆಂದು ಮಾಡಿದ್ದೇನೆ" ಎಂದು ಅರ್ನಾಲ್ಡನು ಅವನಿಗೆ ಸಿಗಾರೇಟು ಕೊಟ್ಟ.

"ನೀನು ಮದುವೆಯಾಗುವಿಯಾ? ಯಾರೊಡನೆ?" ಎಂದು ಹಾನ್ಸನು ಅತ್ಯಾಶ್ಚರ್ಯದಿಂದ ಕೇಳಿದ.

"ನಿನ್ನ ಆಪ್ತವರ್ಗದ ಎಲ್ಸಾಳೊಡನೆ" ಎಂದು ಕಡ್ಡಿ ಕೊರೆದು ಸಿಗಾರೇಟು ಹೊತ್ತಿಸಿದ.

"ಎಲ್ಸಾಳೊಡನೆ. ಭಾಗ್ಯವಂತನು ನೀನು. ಅವಳೂ ಚಲುವೆಯಾಗಿದ್ದಾಳೆ. ಹೆಂಗಳೆಯರ ವಶೀಕರಣವೂ ನಿನಗೆ ಸಾಧಿಸಿದೆ. ಏನು ನೀನು ಮದುವೆಯಾಗುವದು ನಿಜವೆ?" ಎಂದು ಅವಿಶ್ವಾಸದಿಂದ ಕೇಳಿದ.

ಅರ್ನಾಲ್ಡನು ಕೋಪದಿಂದಲೇ ಉತ್ತರಿಸುವವನಿದ್ದ ಆದರೆ ಅಷ್ಟರಲ್ಲಿ ಟೆಲಿಫೋನಿನ ಕರ್ಕಶ ಗಂಟೆ ನುಡಿದದ್ದರಿಂದ ಆದನ್ನೆತ್ತಿಕೊಂಡ.

"ಯಾರು ಕ್ಯಾಪ್ಟನ ಅರ್ನಾಲ್ಡ ಹಾರ್ಟವೆಗ?" ಎಂಬ ಕರ್ಕಶ ದನಿ ಕೇಳಿಸಿತು. ಗಂಡಸಿನದೊ ಹೆಂಗಸಿನದೊ ಆ ದನಿ ಎಂಬುದೂ ತಿಳಿಯುವಂತಿರಲಿಲ್ಲ.

"ಹೌದು, ಅರ್ನಾಲ್ಡ. ಯಾರು ಮಾತಾಡುತ್ತಿರುವದು?"

ಆದರೆ ಇವನ ಈ ಪ್ರಶ್ನೆಯನ್ನು ಲಕ್ಷಿಸದೆ ಆ ವ್ಯಕ್ತಿ ಕಿರಚತೊಡಗಿದ.

"ಎಲ್ಸಾ ಸೀಬರ್ಟಳು ಈಗ ಈಟಲನ ಮೃಗಯಾ ಪ್ರಾಸಾದದಲ್ಲಿ ತನ್ನ ಪ್ರಿಯಕರೊಡನೆ ಕ್ರೀಡಾಸಕ್ತಳಾಗಿದ್ದಾಳೆ ಎಂದು ನಿನ್ನ ಹಿತಚಿಂತಕನೊಬ್ಬನು ನಿನಗೆ ತಿಳಿಸಲಿಚ್ಛಿಸುತ್ತಾನೆ."

ಅರ್ನಾಲ್ಡನು ಟೆಲಿಫೋನನ್ನು ಇಕ್ಕರಿಸಿ ಹಾನ್ಸನನ್ನು ದೂಡಿ ಹೊರಗೆ ಓಡಿದ.

" ಹೆನ್ರಿಚ ! ಮನೋವೇಗದ ವಿಮಾನವೊಂದನ್ನು ತೆಗೆದುಕೊಂಡು ಬಾ " ಎಂದು ಆಜ್ಞಾಪಿಸಿದ. ಕೂಡಲೆ ಪುನಃ ಕೋಣೆಯೊಳಗೆ ಧಾವಿಸಿ ಖಡ್ಗವನ್ನು ತೆಗೆದುಕೊಂಡು ಹೆನ್ರಿಚನ ಹಿಂದಿನಿಂದ ಓಡಿದ.

* * * *

" ನಾಳಿಗೆ ನಾವಾಗಲಿ, ಯುವರಾಜನಾಗಲಿ ಗಂಡಾಂತರವನ್ನು ಎದುರಿಸಬೇಕಾಗುವದು " ಎಂದು ಸ್ಮಿಟನು ಟೆಲಿಫೋನನ್ನು ಕೆಳಗಿಡುತ್ತ ಹೇಳಿದನು. ಪ್ಲೋಯೆಜನು ಅಸಮಾಧಾನವನ್ನು ವ್ಯಕ್ತಪಡಿಸಿದನು.

" ನಾನು ಅಲ್ಲಿಂದ ಹೊರಟು ಬರುವಾಗ ಯುವರಾಜನಿನ್ನೂ ನಿನ್ನಿನ ಘಟನೆಗಳ ತಂದ್ರಿಯಲ್ಲಿಯೆ ಇದ್ದನು ಅವನ ಕೊಲೆಗೈವ ಸಮಯಕ್ಕೆ ಅವನಿಗೆ ಎಚ್ಚರ ಹುಟ್ಟುವದು. ಆದರೆ ಆ ಹುಡುಗಿಯ ವ್ಯವಸ್ಥೆಯೇನು ಅವಳು ಅಲ್ಲಿಗೆ ತಾನಾಗಿ ಹೋಗುವವಳಲ್ಲ "

" ಈಟಲನು ಎಲ್ಲ ವ್ಯವಸ್ಥೆ ಮಾಡಿದ್ದಾನೆ. ಅವಳು ಕುಡಿಯುವ ಕಾಫಿಯಲ್ಲಿ ಡಾಕ್ಟರನು ಕೊಟ್ಟಿರುವ ಪುಡಿಯನ್ನು ಹಾಕಿಬಿಟ್ಟರೆ ಐದಾರು ತಾಸುಗಳ ವರೆಗೆ ಅವಳಿಗೆ ಎಚ್ಚರ ತಪ್ಪುವದು. ಅವಳ ಕೆಲಸ ಪೂರೈಸಿದ ಕೂಡಲೆ ಅವಳನ್ನು ಹೊತ್ತು ರೋಜೆಂಬರ್ಗದ ರಾಣಿಯ ಮನೆಯಲ್ಲಿ ಇಟ್ಟುಬಿಟ್ಟರಾಯಿತು. ಅವಳು ಮೂರ್ಛೆ ತಿಳಿದೆದ್ದ ವೇಳೆ ಇಲ್ಲಿ ನಡೆದ ದಾವದೂ ಅವಳಿಗೆ ತಿಳಿಯಲಾರದು. " ಎಂದು ಸ್ಮಿಟನು ತಿಳಿಸಿದ.

" ಪಾಪ, ಅರ್ನಾಲ್ಡ ! ಇರಲಿ, ಲಿಪರ್ಝಿಗದಿಂದ ಇಂದು ಮುಂಜಾನೆ ಬಂದ ತರುಣರಾರು ? ಅಂಥ ಪ್ರಾಣಿಗಳನ್ನು ನಾನು ಇಡೀ ಜನ್ಮದಲ್ಲಿಯೆ ಕಂಡಿಲ್ಲ. ಅರ್ನಾಲ್ಡನ ನೇತೃತ್ವದಲ್ಲಿ ಅವರ ತರಬೇತಿ ನಡೆಯಲಿದೆಯಂತೆ '

" ಅವರ ಬಗ್ಗೆ ನಾನು ಈಗಲೇ ಏನನ್ನು ಹೇಳಲಾರೆ. ಇಂದು ರಾತ್ರಿಯಾಗಲಿ, ನಾಳೆಯಾಗಲಿ ನಿನಗೆ ಎಲ್ಲವೂ ತಿಳಿಯುವದು " ಎಂದು ವಿಚಿತ್ರವಾಗಿ ನುಡಿದ.

## ೧೩

ಅರ್ನಾಲ್ಡನು ತನ್ನ ವಿಮಾನವನ್ನು ಮೃಗಯಾಪ್ರಾಸಾದದಿಂದ ಐವತ್ತು ಗಜ ದೂರದಲ್ಲಿಳಿಸಿದನು. ತನ್ನ ಮನೋವಿಕಾರಗಳನ್ನೆಲ್ಲ ಆದಷ್ಟು ತೋರ್ಪಡಿಸದಂತೆ ಗಂಭೀರನಾಗಿ ಆ ಪ್ರಾಸಾದದ ಕಡೆಗೆ ಸಾಗಿದನು. ಇಬ್ಬರು ಕಾವಲುಗಾರರು ಇವನನ್ನು ತಡೆದ ಕೂಡಲೆ, ಯುವರಾಜರಿಗಾಗಿ ಮಹತ್ವದ ಸಂದೇಶವಿದೆಂದು ಅವರಿಗೆ ಅರುಹಿದನು. ಅವರು ಮೊದಲು ಅನುಮಾನಿಸಿದರೂ ಅರ್ನಾಲ್ಡನು ಯುವರಾಜನ ಆಪ್ತಸ್ನೇಹಿತನೆಂಬುದನ್ನು ನೆನೆದು ಅವನನ್ನು ಹೋಗಗೊಟ್ಟರು. ಈಟಲನ ವಿನೋದ ಸಮಾರಂಭಗಳಲ್ಲಿ ಈ ಮೊದಲು ಅನೇಕ ಸಲ ಭಾಗವಹಿಸಿದ್ದ ಅರ್ನಾಲ್ಡನಿಗೆ ಆ ಪ್ರದೇಶವೇನೂ ಹೊಸದಾಗಿರಲಿಲ್ಲ.

ಹೆಬ್ಬಾಗಿಲಿನಿಂದ ಪ್ರವೇಶಿಸಲು ತೊಂದರೆ ಆಗಬಹುದೆಂದು ಆ ಪ್ರಸಾದವನ್ನು ಸುತ್ತು ಹಾಕಿ ಹಿಂಬದಿಗೆ ಬಂದನು. ಅವನ ಸುದೈವದಿಂದ ಅಲ್ಲಿಯ ಒಂದು ಕಿಟಕಿಯು ತೆರೆದಿತ್ತು. ಪ್ರಯಾಸದಿಂದ ಆ ಕಿಟಕಿಯೊಳಗಿಂದ ಒಳನುಗ್ಗಿ ಕಳ್ಳಹೆಜ್ಜೆಯಿಂದ ರಾಜಕುಮಾರ ವಿಲಿಯಂನು ತಂಗಿರಬಹುದಾದ ಕೋಣೆಯ ಕಡೆಗೆ ಸಾಗಿದನು. ಅಲ್ಲಿಗೆ ಮುಟ್ಟಿದೊಡನೆ ಮುಚ್ಚಿದ ಕೋಣೆಯ ಆ ಕದಕ್ಕೆ ಕಿವಿಹಚ್ಚಿ ಆಲಿಸತೊಡಗಿದನು. ಒಳಗಿನ ಮಾತುಗಳನ್ನು ಕೇಳುತ್ತಿದ್ದಂತೆ ಅವನು ಕಚ್ಚಿದ. ಒಳಗಿಂದ ಅಟ್ಟಹಾಸದ ದನಿಕೇಳಿದೊಡನೆ ಕದವನ್ನು ಒದ್ದು ತೆರೆದು ಕೋಣೆಯೊಳಗೆ ಪ್ರವೇಶಿಸಿದನು.

ಸೋಫಾದ ಬಳಿಗೆ ನಿಂತಿದ್ದ ಯುವರಾಜನ ಕೈಯಲ್ಲಿ ಸುರಾಪಾತ್ರೆಯಿತ್ತು. ಬೆದರಿದ ಕಣ್ಣುಗಳಿಂದ ಯುವರಾಜನನ್ನು ನೋಡುತ್ತ ಕೆದರಿದ ಕೂದಲುಗಳನ್ನು ಸರಿಪಡಿಸಿಕೊಳ್ಳುತ್ತಿದ್ದ ಎಲ್ಸಾಳ ಕಮನೀಯ ಆಕೃತಿಯ ಪ್ರತಿಬಿಂಬವು ವಿಲಿಯಂನ ಆಸಕ್ತ ನೇತ್ರಗಳಲ್ಲಿ ಮೂಡಿತ್ತು. ವಿಲಿಯಂನ ಅಮಲು ಇಳಿಯದಂತೆ ಈಟಲನು ದಕ್ಷತೆ ವಹಿಸಿದ್ದನೆಂಬುದು ಅಲ್ಲಿಯ ಮೇಜಿನ ಮೇಲೆ ಇದ್ದ ತೆರವಾದ ಎರಡು—ಮೂರು ಶೀಸೆಗಳಿಂದ ಕಂಡುಕೊಳ್ಳಬಹುದಾಗಿತ್ತು. ಬಾಗಿಲು ತೆರೆದ ಸಪ್ಪಳ ಕೇಳಿ ಅಮಲಿನಲ್ಲಿದ್ದರೂ ಯುವರಾಜನು ಗಕ್ಕನೆ ತಿರುಗಿದ.

" ಯಾರು ? ಅರ್ನಾಲ್ಡನೆ ? ಎಲ್ಸಾಳನ್ನು ಒಯ್ಯಲು ಬಂದಿರುವಿಯಾ ? ಇನ್ನು ಅವಳು ನನ್ನನ್ನು ಬಿಟ್ಟು ನಿನ್ನ ಬೆನ್ನು ಹತ್ತುವಳೆಂದು ನನಗೇನೂ ಅನಿಸುವದಿಲ್ಲ " ಎಂದು ತೊದಲುತ್ತ ಆಡಿದ.

ಎಲ್ಸಾ ಅದೇ ಎದ್ದು ನಿಂತಳು. ಯಾರು ಬಂದರೆಂಬುದನ್ನು ಗುರುತಿಸುವಷ್ಟು ಪ್ರಜ್ಞೆ ಅವಳಿಗಿರಲಿಲ್ಲ. ಆದರೆ ಇದನ್ನು ತಿಳಿದುಕೊಳ್ಳುವ ತಾಳ್ಮೆ ಅರ್ನಾಲ್ಡನಿಗಿರಲಿಲ್ಲ. ಕೋಪದಿಂದ ಸಿಡಿದು ಬೀಳುತ್ತಿದ್ದ ಅವನು ಒಂದೆರಡೇ ಹೆಜ್ಜೆಗಳಲ್ಲಿ ಇವರ ಸಮೀಪಕ್ಕೆ ಬಂದ. ಅವನ ಇಂಥ ಭಯಂಕರ ರೂಪವನ್ನು ಕಂಡು ಹೆದರಿದ ಯುವರಾಜನು ಮೇಜಿನ ಮೇಲಿನ ಕಠಾರಿಯನ್ನು ಎತ್ತಿಕೊಂಡು ಗೋಡೆಗೆ ಆತು ನಿಂತು ಸ್ವಲ್ಪ ಎಚ್ಚರದಿಂದ ಕೇಳಿದ

" ಏನು ಅರ್ನಾಲ್ಡ, ಏನಾಯಿತು ? ನೀನಿಲ್ಲಿ ಹೀಗೆ ಬಂದದ್ದಾರೂ ಓ, ನೀನು ನನ್ನನ್ನು ಕೊಲ್ಲುವಿಯಾ?" ಎಂದು ಅವನ ಕೈಯಲ್ಲಿಯ ಪಿಸ್ತೂಲನ್ನು ನೋಡಿದವನೆ ಕಠಾರಿಯಿಂದ ಅರ್ನಾಲ್ಡನ ಮುಂಗೈಗೆ ತಿವಿಯಲು ಆ ಪಿಸ್ತೂಲು ಕೆಳಗೆ ಬಿತ್ತು. ಆದರ ಮರುಕ್ಷಣದಲ್ಲಿಯೇ ಅರ್ನಾಲ್ಡನು ಅವನು ಕುತ್ತಿಗೆಗೆ ಹಾರಿದನು. ಅವನ ಕೈಗೆ ಸಿಕ್ಕ ಬಿದ್ದ ವಿಲಿಯಂನು ಪಾರಾಗಬೇಕೆಂದು ವಿಲಿವಿಲಿ ಒದ್ದಾಡಿದ. ಆದರೆ ಅವನ ಆಟವೇನೂ ನಡೆಯಲಿಲ್ಲ.

" ಅರ್ನಾಲ್ಡ, ನನ್ನನ್ನು ಕೊಲ್ಲಬೇಕೆಂದಿರುವಿಯಾ ? ನಾನು ನಿನ್ನ ಗೆಳೆಯನಲ್ಲವೆ ?"

ಆದರೆ ಜೊರಗೆ ಮೆಟ್ಟಲುಗಳ ಮೇಲೆ ಹೊರಗೆ ಯಾರದೊ ಕಾಲ ಸಪ್ಪಳ ಕೇಳಿ ಬಂದದ್ದರಿಂದ ಯಾರಾದರೂ ಬಿಡಿಸಿಕೊಳ್ಳಿರಿ ಎಂದು ಕೂಗಿದ- ಈ ಮಾತು ಮುಗಿಯುವಷ್ಟರಲ್ಲಿಯೆ ಅರ್ನಾಲ್ಡನು ಅಲ್ಲಿದ್ದ ಬರಿಶಿಸೆಯಿಂದ ಯುವರಾಜನ ತಲೆಗೆ ಇಕ್ಕರಿಸಿ ಬಿಟ್ಟಿದ್ದ. ಒಡೆದು ಪುಡಿ ಪುಡಿಯಾದ ಶಿಸೆಯಿಂದ ಉಂಟಾದ ಗಾಯಗಳಿಂದ ನೆತ್ತರು ಸುರಿಸುತ್ತ ವಿಲಿಯಂನು ನಿಶ್ಚೇತನನಾಗಿ ಭೂಮಿಗೆ ಬಿದ್ದು ಬಿಟ್ಟ. ಕೂಡಲೆ ಎಲ್ಸಾಳು ಭಯದಿಂದ ಕಿರಚಿದಳು. ಇವರ ಈ ಹೋರಾಟ ನಡೆದಾಗ ಅವಳೊಂದು ಮೂಲೆಯಲ್ಲಿ ಕಂಗೆಟ್ಟು ನಿಂತಿದ್ದಳು. ವಿಲಿಯಂನು ಭೂಮಿಗೊರಗಿದ

ಕೂಡಲೆ ಅವಳು ಹುಚ್ಚಿಯಂತೆ ಹೊರಗೆ ಧಾವಿಸಿದಳು. ಆರ್ನಾಲ್ಡನು ಅವಳನ್ನೇ ನೋಡಲಿಲ್ಲವೆಂದೇ ಹೇಳಬಹುದು. ಯುವರಾಜನ ಕೈಯಿಂದ ಬಿದ್ದ ಕಠಾರಿಯನ್ನು ಆರ್ನಾಲ್ಡನು ಎತ್ತಿಕೊಂಡು ತನ್ನ ಕಾಲಬಳಿಗೆ ಬಿದ್ದಿದ್ದ ವಿಲಿಯಂನನ್ನು ತಿವಿತಿವಿದು ಕೊಂದನು. ಅಷ್ಟರಲ್ಲಿ ಯಾರೊ ಅವನನ್ನು ಹಿಂದಿನಿಂದ ಪ್ರತಿಬಂಧಿಸಿ ಅವನ ಕೈಯಲ್ಲಿಯ ಕಠಾರಿಯನ್ನು ಕಿತ್ತಿಕೊಂಡರು. ಆಗ ಬಲಿಷ್ಠ ಕಾವಲುಗಾರರ ಕೈಯ್ಯಲ್ಲಿ ಸಿಕ್ಕಬಿದ್ದ ಅವನಿಗೆ ಮಿಸುಕಾಡಲಾಗಲಿಲ್ಲ.

"ಕ್ಯಾಪ್ಟನ ಆರ್ನಾಲ್ಡ! ಈ ತೊಂದರೆಯ ಅರ್ಥವೇನು ? ಏನು ? ಯುವರಾಜ! ಏನಾಯಿತು!" ಎಂದು ಆದೇ ಪ್ರವೇಶಿಸಿದ್ದ ಈಟಲನು ಯುವರಾಜನ ಕಳೇಬರದ ಹತ್ತಿರ ಮಂಡಿಸಿದನು. ಆರ್ನಾಲ್ಡನ ಹುಚ್ಚು ಇಳಿದು ಹೋಗಿತ್ತು. ಅವನೂ ಕಂಗೆಟ್ಟವನಾಗಿದ್ದ.

"ನಾನೇ ಅವನನ್ನು ಕೊಂದಿದ್ದೇನೆ, ಬೇಕಾದ ಶಿಕ್ಷೆ ವಿಧಿಸಿರಿ. ನಾನೇನೂ ಓಡಿ ಹೋಗುವುದಿಲ್ಲ" ಎಂದ ಆರ್ನಾಲ್ಡ.

"ಇದು ಭಯಂಕರವಾದುದು ಕ್ಯಾಪ್ಟನ ಆರ್ನಾಲ್ಡ. ಯುವರಾಜನಿಗೆ ಮರಣವೆಂತು ಬಂತೆಂಬುದು ಬಹಿರಂಗವಾಗದಂತೆ ಪ್ರಯತ್ನಿಸಬೇಕು" ಎಂದು ಯುವರಾಜನಲ್ಲಿ ಪ್ರಾಣಾಂಶವೂ ಇಲ್ಲವೆಂದು ಮನವರಿಕೆ ಮಾಡಿಕೊಂಡಿದ್ದ ಈಟಲನು ನುಡಿದ

"ಯುವರಾಜರ ಈ ದೇಹವನ್ನು ಮೇಲಿನ ಶಯ್ಯಾಗಾರದಲ್ಲಿ ಒಯ್ದು ಮುಚ್ಚಿಡಿರಿ. ನಂತರ ಈ ಕೋಣೆಯನ್ನು ಸರಿಪಡಿಸಿರಿ. ಇಲ್ಲಿ ನಡೆದ ಸಂಗತಿಯ ಸುಳುವು ಯಾರಿಗೂ ಹತ್ತ ಬಾರದು" ಎಂದು ಈಟಲನು ತನ್ನ ಕಾವಲುಗಾರರಿಗೆ ಆಜ್ಞಾಪಿಸಿ "ಆರ್ನಾಲ್ಡ ನೀನು ನನಗೆ ಎಲ್ಲ ಕಥೆಯನ್ನು ಹೇಳಬೇಕು. ಇದನ್ನು ಹೇಗೆ ನಿಸ್ತರಿಸಬೇಕೆಂಬುದನ್ನು ಆಲೋಚಿಸೋಣ ಆದರೆ ಮೊದಲು ನೀನು ಇಲ್ಲಿಂದ ಓಡಿ ಹೋಗುವದಿಲ್ಲೆಂಬ ವಚನ ಕೊಡಬೇಕು." ಎಂದು ಆರ್ನಾಲ್ಡನನ್ನು ಕೇಳಿದ.

" ನೀವು ಬೇಕಾದ ಶಿಕ್ಷೆ ವಿಧಿಸಬಹುದೆಂದು ನಾನು ಹೇಳಿದ್ದೇನೆ. ಅವನಿಗೆ ನಾನು ಯೋಗ್ಯ ದಂಡನೆಯನ್ನೇ ಕೊಟ್ಟಿದ್ದೇನೆ. ಹೆಚ್ಚಿಗೇನನ್ನೂ ಹೇಳ ಬಯಸುವದಿಲ್ಲ. "

ಅವನ ಆ ನಿರ್ವಿಕಾರ ಭಾವವನ್ನೇ ಕಂಡು ಈಟಲನೂ ನಡುಗಿದ. ಇದುವರೆಗೆ ಎಲ್ಲವೂ ತನ್ನ ಇಚ್ಛೆಯಂತೆ ನೆರವೇರಿದ ಸಮಾಧಾನ ಈಟಲನಿಗೆ ಇತ್ತು. ಆದರೆ ಈ ವಿಚಿತ್ರಪ್ರಾಣಿಯ ಬಗ್ಗೆ ಏನೋ ಸಂದೇಹವಾಯಿತು. ಆದರೆ ಅವನಿನ್ನೂ ಅನೇಕ ಕಾರ್ಯಗಳನ್ನು ಸಾಧಿಸಬೇಕಾಗಿತ್ತು. ತಾನು ಆಕ್ರಮಿಸಲು ಹಾರೈಸುತ್ತಿದ್ದ ಸಿಂಹಾಸನಕ್ಕೆ ಇನ್ನೂ ಕೆಲವರನ್ನು ಬಲಿಗೊಡಬೇಕಾಗಿತ್ತು.

" ನನ್ನೊಡನೆ ಬಾ. ಇನ್ನು ಮುಂದೇನು ಮಾಡಬೇಕೆಂಬುದನ್ನು ಆಲೋಚಿಸೋಣ " ಎಂದು ಈಟಲನು ಅಲ್ಲಿಂದ ಹೊರಹೊರಟ.

## ೧೪

ಅರ್ನಾಲ್ಡನು ಬರ್ಲಿನಕ್ಕೆ ಹಿಂತಿರುಗಿದಾಗ ಮಧ್ಯರಾತ್ರಿಯಾಗಿತ್ತು. ವಿಮಾನದಿಂದ ಇಳಿದವನೆ ತನ್ನ ತಂದೆ, ಈಗ ಅರವತ್ತು ವರ್ಷದ ವೃದ್ಧ, ಮೇಜರ ಹಾರ್ಟವೆಗನು ವಾಸಿಸುತ್ತಿದ್ದ ಫ್ರೆಡರಿಕಸ್ಟ್ರೀಟಕ್ಕೆ ಧಾವಿಸಿದ. ಹಾರ್ಟವೆಗನು ಮನೆಯ ಬಾಗಿಲನ್ನು ದಡದಡನೆ ಬಡಿದ. ಇಂಥ ನಡುರಾತ್ರಿಯಲ್ಲಿ ತೊಂದರೆ ಕೊಡುವರಾರೆಂದು ಸೇವಕನೊಬ್ಬನು ಗುಣಗುಟ್ಟುತ್ತ ಬಾಗಿಲನ್ನು ತೆರೆದ. ಹೊರಗೆ ಅರ್ನಾಲ್ಡನನ್ನು ಕಂಡು ಅವನಿಗೆ ಹಾಯೆನಿಸಿತು.

ಮೇಜರ ಹಾರ್ಟವೆಗನು ತನ್ನ ಅಭ್ಯಾಸದ ಕೋಣೆಯಲ್ಲಿರುವನೆಂದು ಅರಿತುಕೊಂಡು, ಸೇವಕನನ್ನು ಹೆಚ್ಚಿಗೆ ಪ್ರಶ್ನಿಸದೆ ಅಲ್ಲಿಗೆ ಓಡಿದ. ಬಾಗಿಲನ್ನು ತಟ್ಟದೆ ಧಡಾರನೆ ಬಾಗಿಲು ತೆರೆದು ಒಳಗೆ ಪ್ರವೇಶಿಸಿದ.

" ಏನು ? ಅರ್ನಾಲ್ಡ, ಏನು ಸಂಗತಿ " ಎಂದು ಅವಸರದಿಂದ ಬಂದ ಅವನನ್ನು ಮೇ. ಹಾರ್ಟವೆಗನು ಕೇಳಿದ.

ಅರ್ನಾಲ್ಡನು ಅವನೆದುರಿಗೆ ಬಂದು ನಿಂತ. ಅವನ ಮುಖ ಶಿಲಾ ಪ್ರತಿಮೆಯಂತಿತ್ತು. ಆದರೆ ಅವನ ಕಣ್ಣುಗಳಲ್ಲಿ ಬೆಚ್ಚಿಸುವ ನೋಟವಿತ್ತು.

" ಏನು ನಡೆದಿದೆಂಬುದು ನಿನಗೆ ಬೇಗನೆ ತಿಳಿದೀತು. ಈಗ ಇದು ದಿಟವೊ ಸಟೆಯೊ ಹೇಳಿಬಿಡು " ಎಂದು ಕೆಲವು ಕಾಗದಗಳನ್ನು ಮೇಜಿನ ಮೇಲೆಸೆದ. ಆ ಮುದುಕನು ಯಂತ್ರದಂತೆ ಕಾಗದಗಳನ್ನೆತ್ತಿಕೊಂಡ, ಅದರಲ್ಲಿಯ ಮೊದಲನೆ ಅಕ್ಷರವನ್ನು ಓದಿದೊಡನೆ ಅವನ ಮುಖ ವಿವರ್ಣವಾಯಿತು.

" ಅಯ್ಯೋ ದೇವರೆ ! ನಿನಗೆ ಇದು ಹೇಗೆ ದೊರಕಿತು ? "

" ಹೇಳು, ಇದು ನಿಜವೇ ? " ಎಂದು ಅವಡುಗಚ್ಚಿದ.

ಇದು ವರೆಗೆ ತಂದೆಯೆಂದು ಮೆರೆಯುತ್ತಿದ್ದ ಅವನು ಅರ್ನಾಲ್ಡನನ್ನು ಭೀತಿಯಿಂದ ನೋಡತೊಡಗಿದ. ಸುಳ್ಳು ಹೇಳಿದರೆ ಈಗ ಪ್ರಯೋಜನವಿಲ್ಲೆಂದು ಅವನಿಗೆ ಹೊಳೆದು ಹೋಯಿತು. ಅವನು ತಲೆ ಕೆಳಗೆ ಹಾಕಿದ. ಕಾಗದಗಳು ನಡಗುತ್ತಿದ್ದ ಕೈಗಳಿಂದ ಕಳಚಿ ಬಿದ್ದವು.

" ಹೌದು, ನಿಜ " ಎಂದಿಷ್ಟೆ ಕೆಳದನಿಯಲ್ಲಿ ಉಸುರಿಸಿದ.

" ಹಂ, ಅಂದರೆ ನಾನು ಕೇವಲ ಪ್ರಯೋಗಜಾತನೆ ? ಆ ರಾಕ್ಷಸನ ಕೃತಿ, ಆತ್ಮಹೀನ ಪ್ರಾಣಿ ಸಾಮ್ರಾಟನ ಆಟಿಗೆ ! ಅವನ ಮನಸಿಗೆ ಬಂದಾಗ! ಮೂಕ ಕುರಿಯಂತೆ ಬಲಿಯಾಗಬೇಕಾದ ಜೀವ !! ಪ್ರೊ. ವರ್ನನರ ಸಂಶೋಧನೆಯ ಫಲಮಾತ್ರ ನಾನು !!! " ಎಂದು ಅಟ್ಟಹಾಸದಿಂದ ಗಹಗಹಿಸಿ ನಗಹತ್ತಿದ. ಇವನಿಗೆ ಹುಚ್ಚು ಹಿಡಿಯಿತೇನೊ ಎನಿಸಿತು ಮೇಜರನಿಗೆ.

" ನಿನಗೆ ಕಾಗದ ಹೇಗೆ ದೊರೆಯಿತೊ ನಾನರಿಯೆ. ಆದರೆ ನೀನು ಗೋಣಗುಟ್ಟುವ ಕಾರಣವೇನೂ ಇಲ್ಲ. ನಿನಗೆ ಬಯಸಿದ್ದೆಲ್ಲ ದೊರೆತಿದೆ. ನಿನ್ನಂಥ ಭಾಗ್ಯವಂತರು ಇಡೀ ಜರ್ಮನದಲ್ಲಿಲ್ಲ."

" ಹೌದು ನೀನು ಶ್ರಮಪಟ್ಟು ನನ್ನನ್ನು ಮುಖಂಡನಾಗಲು ಯೋಗ್ಯನಾಗುವಂತೆ ತರಬೇತಿ ಕೊಟ್ಟಿರುವಿ. ಮುಖಂಡ, ಪ್ರಸಂಗ ಬಂದಾಗ

ಜನರನ್ನು ಮೃತ್ಯುವಿನ ದವಡೆಯಲ್ಲಿ ಒಯ್ಯುವ ಮುಖಂಡನಲ್ಲವೆ! ನಿನಗೆ ನಿರಾಶೆಯಾಗಲಿಕ್ಕಿಲ್ಲ. ನಾನು ಈ ಪ್ರಯೋಗಜಾತರನ್ನು ಸಾವಿನ ಬಾಯಿಗೆ ಬಲಿ ಕೊಡುತ್ತೇನೆ. ಆದರೆ ಬ್ರಿಟನ ಫ್ರಾನ್ಸುಗಳ ವಿರುದ್ಧ ಹೋರಾಡಿ ಅಲ್ಲ. ನಿಮ್ಮ ವಿಚಾರವೆಂತು ಸಂಪೂರ್ಣವಾಗಿ ಫಲಿಸುವದೆಂಬುದನ್ನು ನೀವೇ ಕಂಡುಕೊಳ್ಳುವಿರಂತೆ" ಎಂದ ಅರ್ನಾಲ್ಡ ತಿರಸ್ಕಾರದಿಂದ. ಅಲ್ಲಿಂದ ಹೊರಟು ಹೋಗಬೇಕೆಂದು ತಿರುಗಿದ ಅರ್ನಾಲ್ಡನನ್ನು ಮೇಜರನು ಕೈಹಿಡಿದು ನಿಲ್ಲಿಸಿದ.

"ಅರ್ನಾಲ್ಡ, ನಿನ್ನ ವಿಚಾರವೇನು? ನಿನಗೆ ಹುಚ್ಚು ಹಿಡಿದಿದೆಯೆ? ಸಾಮ್ರಾಟನು ನಿನ್ನ ಒಡೆಯನೆಂಬುದನ್ನು ಮರೆಯದಿರು. ಅವನ ವಿರುದ್ಧ ಕೈಯೆತ್ತುವ ದ್ರೋಹ ಬಗೆಯಬೇಡ."

"ದೇವರು" ಎಂದು ಅರ್ನಾಲ್ಡನು ಸರ್ರನೆ ತಿರುಗಿ ಮೇಜರನನ್ನು ಎದುರಿಸಿದ.

"ನೀನು ನನಗೆ ದೇವರ ವಿಷಯ ಹೇಳಿಕೊಡಬೇಕೆ? ದೇವರೇ ಇಲ್ಲವೆಂದು ನೀವಿಷ್ಟು ದಿನ ನನಗೆ ಬೋಧಿಸಿದಿರಿ. ಈಗ ದೇವರು ಶಾಪಕೊಡುವನೆಂದು ಹೇಳುವಿರಾ? ಯಾವ ದೇವರು ಹೇಳು? ಯಾರ ದೇವರು? ನಿನ್ನ ದೇವರೊ, ಸಾಮ್ರಾಟನ ದೇವರೊ?" ಎಂದು ಕೊಸರಿಕೊಂಡು ಬಾಗಿಲ ಕಡೆಗೆ ಸಾಗಿದ. ಬಾಗಿಲಲ್ಲಿ ನಿಂತು,

"ರಕ್ಕಸಾ, ನೀನಿನ್ನು ದೇವರ ನಾಮಸ್ಮರಣೆ ಮಾಡು. ವರ್ನರನ ಪ್ರಯೋಗಜಾತರಿಗೆ ದಯೆಯಿಲ್ಲ." ಎಂದು ಹೋಗಿಬಿಟ್ಟ.

* * * * * *

"ಕಿಡಿ ಹೊತ್ತಿದೆ. ಈಗಲೆ ಕೆಲಸ ಪೂರೈಸಿರಿ" ಎಂಬ ಚೀಟಿಯೊಂದನ್ನು ಅರಮನೆಯ ಕಾವಲುಗಾರನು ತಂದು ಸ್ಮಿಟನಿಗೆ ಕೊಟ್ಟನು. ಅವನು ಸಮಾಧಾನದ ನಗೆ ನಕ್ಕು ಅದನ್ನು ಚೂರು ಚೂರಾಗಿ ಹರಿದು ಎಸೆದುಬಿಟ್ಟ, ನಂತರ ಟೆಲಿಫೋನನ್ನು ಎತ್ತಿಕೊಂಡ.

## ೧೫

ಶಾರ್ಲಟೆಂಬರ್ಗ್‌ದ ದಂಡಿನ ಠಾಣ್ಯದಲ್ಲಿ ಕೆಲವು ಅಧಿಕಾರಿಗಳು ಹರಟೆ ಕೊಚ್ಚುತ್ತ ಕುಳಿತಿದ್ದಂತೆ ಒಬ್ಬ ಸೈನಿಕನು ಧಾವಿಸಿ ಒಳಗೆ ಬಂದನು.

" ಏನು, ತಲೆ ಕೆಟ್ಟದಿದೆಯೆ ನಿನಗೆ ? " ಎಂದು ಕರ್ನಲನು ಗದರಿಸಿದ.

" ಕರ್ನಲ, ಮುಖ್ಯ ಠಾಣ್ಯದಿಂದ ಈ ಆಜ್ಞೆ ಬಂದಿದೆ " ಎಂದು ಅವನು ಕಾಗದವನ್ನು ಕೈಗೆ ಕೊಟ್ಟ. ಅವನು ವ್ಯಾಕುಲನಾದಂತಿದ್ದ.

" ಏನು, ಬರ್ಲಿನದಲ್ಲಿ ಕ್ರಾಂತಿ ! ಸೈನಿಕರನ್ನು ಕೂಡಲೇ ಕಳಿಸಬೇಕು. ಪೋಲೀಸರು ಹತಪ್ರಭರಾಗಿದ್ದಾರೆ. ಅವನು ಈ ಹೊಸ ಸೈನಿಕರನ್ನು ಕರೆದುಕೊಂಡು ಹೋಗಬೇಕು. ನಮ್ಮ ನುರಿತ ಜನರಿಗಿಂತ ಈ ಹೊಸಬರೆ ಜನರ ಗುಂಡುಗಳಿಗೀಡಾಗಿ ಮಡಿಯುವದು ಒಳಿತು " ಎಂದು ಕರ್ನಲನು ಜಿಲ್ಲಿಂದ ಹೊರಬಿದ್ದ. ಇತರ ಅಧಿಕಾರಿಗಳೂ ಬೆಂಬತ್ತಿದರು. ಹೊರಗೆ ಬಯಲಿನಲ್ಲಿ ಆ ವಜ್ರಕಾಯದ ತರುಣರು ಸಾಲುಸಾಲಾಗಿ ನಿಂತಿದ್ದರು. ಕರ್ನಲನು ಮುಂದೆ ಸಾಗುವಷ್ಟರಲ್ಲಿಯೆ ಅರ್ನಾಲ್ಡನು ಬಂದು ಕುದುರೆಯಿಂದ ಕೆಳಗಿಳಿದ.

" ಕ್ಯಾಪ್ಟನ ಅರ್ನಾಲ್ಡ ? ನಿನಗೆ ಸುದ್ದಿ ತಿಳಿದಿದೆಯೆ ? ಈ ಜನರನ್ನು ಈಗಲೆ ಬರ್ಲಿನಕ್ಕೆ ಕರೆದೊಯ್ಯು. ಅವಶ್ಯವೆನಿಸಿದರೆ ಆ ಪುಂಡರ ನೆತ್ತರ ಹರಿಸು. ಪರಿಸ್ಥಿತಿಯನ್ನು ಎದುರಿಸಲು ಪೋಲೀಸರಿಗೆ ಸಾಧ್ಯವಾದಂತೆ ತೋರುವದಿಲ್ಲ. ಅತ್ಯುಗ್ರ ಉಪಾಯುಗಳನ್ನು ನಿಯೋಜಿಸಲೂ ನಿನಗೆ ಅಧಿಕಾರವಿದೆ " ಎಂದ ಕರ್ನಲ.

" ಹೆದರಬೇಕಾದ ಕಾರಣವಿಲ್ಲ. ನಾನೆಂದಿಗೂ ಹಿಂಜರಿಯುವದಿಲ್ಲ, ಯಾವದಕ್ಕೂ ಹೆದರುವದಿಲ್ಲ " ಎಂದು ಪುನಃ ಕುದುರೆಯನ್ನೇರಿ ಹೊಸ ಸೈನಿಕರತ್ತ ಸಾಗಿದ.

" ನನ್ನ ತರುಣ ಬಾಂಧವರೇ, ಫ್ರಾಂಕಫರ್ಟ್, ಮ್ಯುನಿಕ, ಲಿಪಝಿಗಗಳ ದಾರಿಯನ್ನೇ ಬರ್ಲಿನವೂ ಅನುಸರಿಸಿದೆ. ಈ ಕ್ರಾಂತಿಯನ್ನು

ತಡೆಯಲು ನಿಮ್ಮನ್ನು ಅಲ್ಲಿಗೆ ಒಯ್ಯಬೇಕೆಂಬ ಆಜ್ಞೆಯಾಗಿದೆ. ಇನ್ನು ಜೀವದ ಪರಿವೆ ನಿಮಗಿಲ್ಲ. ಆದರೆ ಈ ಜನರು ಕ್ರಾಂತಿಯನ್ನು ಏಕೆ ಪ್ರಾರಂಭಿಸಿದ್ದಾರೆ ಎಂಬುದು ನಿಮಗೆ ತಿಳಿದಿದೆಯೆ? ಸಾಮ್ರಾಟನು ಇನ್ನೊಂದು ಯುದ್ಧ ಹೂಡಬೇಕೆಂದಿರುವದರಿಂದ ಜನರು ಈ ಕ್ರಾಂತಿಯನ್ನು ಪ್ರಾರಂಭಿಸಿದ್ದಾರೆ"

ಯುದ್ಧದ ಹೆಸರೆತ್ತಿದ ಕೂಡಲೆ ಅವರೆಲ್ಲರಿಗೆ ಸಂಭ್ರಮವಾಯಿತು. ಆದರೆ ಕರ್ನಲನು ಮಾತ್ರ ಅರ್ನಾಲ್ಡನ ಉದ್ದೇಶವನ್ನು ಅರಿಯಲಾರದವನಾಗಿ ಒಳಗೊಳಗೇ ಕುದಿಯುತ್ತಿದ್ದ.

"ಒಂದು ದಂಗೆ ಸದೆ ಬಡೆಯಲು ಇಷ್ಟೊಂದು ಉತ್ತೇಜನ ಕೊಡ ಬೇಕಾದ ಕಾರಣವೇನು. ಅವರನ್ನು ಕೂಡಲೆ ಕರೆದುಕೊಂಡು ಹೋಗಲು ಅವನಿಗೆ ತಿಳಿಸಿರಿ." ಎಂದು ಕರ್ನಲನು ಪುಟ ಪುಟಸಿದ.

ಅರ್ನಾಲ್ಡನ ಮಾತು ಮುಂದೆ ಸಾಗಿತು.

"ಏನು? ಯುದ್ಧದಿಂದ ನಿಮಗೆ ಆನಂದವೆ? ಯುದ್ಧವೆಂದರೇನೆಂಬುದನ್ನು ಅರಿತಿರುವಿರಾ? ನಿಮಗೆ ಸ್ವಾತಂತ್ರ್ಯವಿಲ್ಲದಾಗುವದು. ಸಾಮ್ರಾಟನ ಸಂತೋಷಕ್ಕಾಗಿ ನೀವು ರಣಭೂಮಿಗೆ ಬಲಿಯಾಗಬೇಕಾಗುವದು ನೀವು ಒಪ್ಪದಿದ್ದರೆ ಸಾಮ್ರಾಟನೇ ನಿಮ್ಮನ್ನು ಗುಂಡಿಕ್ಕಿ ಕೊಲ್ಲುವನು. ಹೇಗಾದರೂ ನಿಮಗೆ ಮರಣ ತಪ್ಪಿದ್ದಲ್ಲ. ಒಬ್ಬನ ಸಂತೋಷಕ್ಕಾಗಿ ನಿಮ್ಮಂಥ ತರುಣರು ಇತರರನ್ನು ಹಿಂಸಿಸಿ ನೀವೂ ಸಾಯುವದೇಕೆ? ನಿಮ್ಮ ಸಂತೋಷಕ್ಕಾಗಿಯೆ ನೀವು ಜನರನ್ನು ಕೊಲ್ಲುವದು ಒಳಿತಲ್ಲವೆ?"

ಸೈನಿಕರಲ್ಲೆಲ್ಲ ಗುಜುಗುಜು.

"ಹಾಗಿದ್ದರೆ ನಾನು ನಿಮ್ಮನ್ನು ಬರ್ಲಿನಕ್ಕೆ ಒಯ್ಯುವೆನು. ಈ ಅನ್ಯಾಯದ ವಿರುದ್ಧ ಕ್ರಾಂತಿಯೆದ್ದಿರುವ ಜನರನ್ನು ನಾವೂ ಕೂಡಿಕೊಳ್ಳೋಣ ಈ ದುಷ್ಟ ಸೈನ್ಯ ಶಾಖೆಯ ಪದ್ಧತಿಯನ್ನೇ ನಿರ್ಮೂಲ ಮಾಡೋಣ ನಂತರ ನೀವು ಸ್ವತಂತ್ರರು. ನಡೆಯಿರಿ. ಬರ್ಲಿನಕ್ಕೆ ಧಾವಿಸಿರಿ"

"ಸ್ವಾತಂತ್ರ್ಯಕ್ಕೆ ಜಯವಾಗಲಿ. ವಿಘಾತಕರು ಹಾಳಾಗಲಿ" ಎಂದ ಭಯಂಕರ ಗರ್ಜನೆ. ಸೈನಿಕರೆಲ್ಲ ಅರ್ನಾಲ್ಡನ ಸುತ್ತಲೂ ಮುಕರಿದರು.

" ಆ ಹುಚ್ಚನನ್ನು ಬಂಧಿಸಿರಿ. ಈ ಜನರು ಇನ್ನು ನಿವಿಷಾರ್ಥದಲ್ಲಿ ಜಾರಿ ಹೋಗುವರು " ಎಂದು ಕರ್ನಲನು ಅರಚಿದ. ಕೆಲವು ಆಪ್ತಿಯನ ಸೈನಿಕರೊಂದಿಗೆ ಮುಂದೆ ಬಂದ.

" ಅರ್ನಾಲ್ಡ, ನೀನು ಈಗಲೆ ಶರಣಾಗತನಾಗದಿದ್ದರೆ ನಿನಗೆ ಗುಂಡಿಕ್ಕ ಬೇಕಾದೀತು ! ಎಂದು ಕರ್ನಲ ಗರ್ಜಿಸಿದ.

" ಅಂಥ ಉಪದ್ವ್ಯಾಪ ಬೇಡ ಕರ್ನಲ. ನಿಮ್ಮ ಮೇಲಿನ ಸಂಕಟ ಗಳನ್ನು ಅರಿತುಕೊಂದು ನಮ್ಮನ್ನು ಸೇರುವದೇ ಒಳಿತು "

" ನಿನ್ನನ್ನು ಸೇರಬೇಕು, ಕುನ್ನಿ " ಎಂದಿಷ್ಟೆ ಅವನಿಗೆ ಆಡಲು ಸಾಧ್ಯವಾಯಿತು. ಕೂಡಲೆ ಪಿಸ್ತೂಲು ಹೊರತೆಗೆದು ಹಿಂದುಮುಂದೆ ನೋಡದೆ ಅರ್ನಾಲ್ಡನ ಮೇಲೆ ಗುಂಡು ಹಾರಿಸಿದ. ಆದರೆ ಸಿಟ್ಟಿನಿಂದ ಅವನ ಕೈನಡಗುತ್ತಿದ್ದದ್ದರಿಂದ ಗುರಿತಪ್ಪಿ ಗುಂಡು ಅರ್ನಾಲ್ಡನ ಕೆನ್ನೆಯ ಸಮೀಪದಿಂದ ಸುಯ್ಯೆಂದು ಹಾಯ್ದುಹೋಯಿತು. ಆದರೆ ಅದರ ಪರಿಣಾಮ ತರುಣ ಸೈನಿಕರ ಮೇಲೆ ವಿಪರೀತವಾಯಿತು. ಕರ್ನಲನೂ ಅವನ ಸೈನಿಕರೂ ಆತ್ಮರಕ್ಷಣೆಗಾಗಿ ಸಿದ್ಧರಾಗುವ ಮೊದಲೇ ಇವರು ಅವನ್ನು ತಿವಿಗತ್ತಿಯಿಂದ ಸರಾಗವಾಗಿ ಇರಿದು ಹಾಕಿದರು. ರಕ್ತದ ಪ್ರಥಮ ರುಚಿಕಂಡ ಈ ಸೈನಿಕರು ರಕ್ತಮಯವಾದ ತಮ್ಮ ತಿವಿಗತ್ತಿಗಳನ್ನು ಝಳಪಿಸುತ್ತ ಜಯಘೋಷಗಳನ್ನು ಮಾಡುತ್ತ ಆ ಠಾಣ್ಯದಿಂದ ಹೊರಬಿದ್ದರು.

ಸ್ವಾತಂತ್ರ್ಯ ! ಸ್ವಾತಂತ್ರ್ಯ ! ಬರ್ಲಿನ ಚಲೋ !!

ಅರ್ನಾಲ್ಡನು ಸಮಾಧಾನದಿಂದ ಉಸಿರ್ಗರೆದ. ಮುಖಂಡನಿಲ್ಲದೆ ಅವರು ತಮ್ಮ ಕೆಲಸ ಪೂರೈಸಬಲ್ಲರು ಎಂದಂದುಕೊಂಡು ಕುದುರೆಯನ್ನೇರಿ ತಾನೂ ಹೊರಬಿದ್ದ.

## ೧೬

ಸಾಮ್ರಾಟನು ತನ್ನ ಅರಮನೆಯ ದಿವಾಣಖಾನೆಯಲ್ಲಿ ದಿಗ್ಭ್ರಮೆ ಗೊಂಡು ಅತ್ತಿಂದಿತ್ತ ತಿರುಗಾಡುತ್ತಿದ್ದನು. ನಗರದಲ್ಲಿ ಕ್ರಾಂತಿ ಪ್ರಾರಂಭ

ವಾಗಿದೆಂದು ಇಂದು ಮುಂಜಾನೆ ಕಂಗೆಟ್ಟ ದೂತನೊಬ್ಬನು ಬಂದು ಹೇಳಿದಾಗಿನಿಂದ ಬರಿ ಅಪ್ಪಣೆ ಕೊಡುವದರಲ್ಲಿ, ಮಂತ್ರಿಗಳ ಮತ್ತು ಸೇನಾಪತಿಗಳ ವರದಿಯನ್ನು ಕೇಳಿಕೊಳ್ಳುವದರಲ್ಲಿ ಸಮಯ ಕಳೆದು ಹೋಗಿತ್ತು. ರಾಜಧಾನಿಯಲ್ಲಿ ದಂಡಿನ ಕಾಯಿದೆಯನ್ನು ಜಾರಿ ಮಾಡ ಬೇಕು ಎಂದು ಮುಂಜಾನೆ ಹನ್ನೊಂದು ಗಂಟೆಗೆ ಸಾಮ್ರಾಟನು ಅಪ್ಪಣೆ ಯಿತ್ತನು. ಬೀದಿಗಳಲ್ಲಿ ವಿಘ್ನಗಳನ್ನೊಡ್ಡಿ ಮಶಿನಗನ್ನುಗಳಿಂದ ಜನರನ್ನು ಹುಳಗಳಂತೆ ಕೊಂದರೂ ಕ್ರಾಂತಿಜ್ವಾಲೆಯು ಇನ್ನೂ ಪುಟದೇಳುತ್ತಿತ್ತು. ಸಾಮ್ರಾಟನು ಕಿಟಕಿಯ ಹತ್ತರ ಬಂದು ಆಲಿಸಿದ. ರಾಜಧಾನಿಯ ಮೂಲೆಮೂಲೆಗಳಲ್ಲಿ ಗುಂಡಿನ ಶಬ್ದ ಕೇಳಬರುತ್ತಿತ್ತು. ಜೊತೆಗೆ ಜನರ ಚೀತ್ಕಾರವೂ ಕಿವಿಗಡಚಿಕ್ಕಿಸುತ್ತಿತ್ತು. ಯಾವ ಆಲೋಚನೆಯಿಲ್ಲದೆ ವಿಧ್ವಂಸಕ ಚಟುವಟಿಕೆಗಳಲ್ಲಿ ತೊಡಗಿದ ಕ್ರಾಂತಿಕಾರರು ಹೊತ್ತಿಸಿದ ಅಗ್ನಿನಾರಾಯಣನಿಗೆ ಅನೇಕ ಕಟ್ಟಡಗಳು ಆಹುತಿಯಾಗಿದ್ದವು. ಉರಿಯ ನಾಲಿಗೆಗಳು ಇನ್ನೂ ಮೇಲೆ ಮೇಲೆ ಚಾಚುತ್ತಿದ್ದವು.

ಸಾಮ್ರಾಟನಿಗೆ ಹೆದರಿಕೆ ಹುಟ್ಟಿಕೊಂಡಿತ್ತು. ಹಣೆಯ ಮೇಲೆಲ್ಲ ಬೆವರಿನ ಹನಿಗಳು ತುಂಬಿದ್ದವು. ಸೈನಿಕರು ಈ ದಂಗೆಯನ್ನು ನಿಲ್ಲಿಸಲಿಲ್ಲ ವಾದರೆ ಕ್ರಾಂತಿಕಾರರ ರೋಷಾಗ್ನಿಗೆ ತನ್ನ ಅರಮನೆಯೆ ಬಲಿಯಾಗುವದು ಎಂದು ಅವನಿಗೆ ಹೊಳೆದು ಹೋಯಿತು. ಇಲ್ಲಿಂದ ಪಲಾಯನ ಹೇಳುವದೇ ಒಳಿತು. ಆದರೆ ಎಲ್ಲಿಗೆ? ರಾಜ್ಯದ ನಗರಗಳಲ್ಲೆಲ್ಲ ಕ್ರಾಂತಿ ಹಬ್ಬಿಬಿಟ್ಟಿತ್ತು. ಇನ್ನು ಕೆಲ ದಿನಗಳಲ್ಲಿಯೆ ಅದು ಹಳ್ಳಿಹಳ್ಳಿಗೂ ಹರಡುವದೆಂದು ಸಾಮ್ರಾಟ ನಿಗೆ ಖಂಡಿತವಾಗಿತ್ತು.

ಅಷ್ಟರಲ್ಲಿಯೆ ಜಯಘೋಷಗಳು ಸ್ಪಷ್ಟವಾಗಿ ಕೇಳಿಸಹತ್ತಿದವು. ಜನರ ತಂಡವೊಂದು ಅರಮನೆಯ ಕಡೆಗೆ ಸಾಗಿ ಬರುತ್ತಿದ್ದಂತೆ ಕಂಡಿತು.

" ಸೈನಿಕರು ಹಾಳಾಗಲಿ ! ನಮಗೆ ಯುದ್ಧ ಬೇಡ !! ರಾಜಕುಲ ನಷ್ಟವಾಗಲಿ !!! "

ಕೊನೆಯ ಜಯಘೋಷವನ್ನು ಕೇಳಿದೊಡನೆ ಸಾಮ್ರಾಟನ ಹಲ್ಲ ಣವೇ ಹಾರಿಹೋಯಿತು. ಅವನು ಕಿಟಕಿಯಿಂದ ಒಳಗೆ ಸರಿದ.

ಅವರಿಗಿನ್ನೂ ಸಮಾಧಾನವಾಗಿಲ್ಲವೆ? ತನ್ನನ್ನೂ ಕೊಲ್ಲುವರೆ? ಹೆದರಿಕೆಯಿಂದ ಅವನು ಮೇಜಿಗೆ ಆತುನಿಂತಿದ್ದ- ಈಗ ಪಲಾಯನಸೂಕ್ತ ಪರಿಸು ವದೊಂದೇ ಉಪಾಯ. ಆದರೆ ಎಲ್ಲಿಗೆ? ಹೇಗೆ? ಅಷ್ಟರಲ್ಲಿಯೆ ಭಯಂಕರ ಸ್ಫೋಟ.

ಜ. ಬ್ರೀಟಕೊಫ್ಸನು ಕೆಲವು ಅಧಿಕಾರಿಗಳೊಂದಿಗೆ ಸಾಮ್ರಾಟನಿದ್ದಲ್ಲಿಗೆ ಧಾವಿಸಿ ಬಂದು

"ಪಾಟ್ಸ್ ಡಾಮುದ ವಿಮಾನ ಠಾಣ್ಯವನ್ನು ಅವರು ವಶಪಡಿಸಿಕೊಂಡಿದ್ದಾರೆ. ರಾಜಧಾನಿಯ ಮೇಲೆ ಬಾಂಬಿನ ಮಳೆ ಕರೆಯಲು ಅಲ್ಲಿಂದ ವಿಮಾನಗಳನ್ನು ಹಾರಿಸಿದ್ದಾರೆ." ಎಂದು ತಿಳಿಸಿದ.

ಅಷ್ಟರಲ್ಲಿಯೆ ಒಂದರ ಹಿಂದೊಂದು ಅನೇಕ ಸ್ಫೋಟಗಳು ಸಂಭವಿಸಿ ಕಾಜಿನ ಚೂರುಗಳು ಇವರನ್ನು ಆವರಿಸಿದವು.

"ಆದರೆ ಸೈನಿಕರೇನು ಮಾಡುತ್ತಿದ್ದಾರೆ? ಬಳೆ ತೊಟ್ಟದ್ದಾರೆಯೆ! ಈ ಪುಂಡರನ್ನು ಹತ್ತಿಕ್ಕಲು ನಿಮ್ಮಲ್ಲಿ ಯಾರಿಗೂ ಸಾಮರ್ಥ್ಯವಿಲ್ಲವೆ?" ಎಂದು ಸಾಮ್ರಾಟನು ಗದ್ದರಿಸಿದ.

"ಪ್ರಭೂ, ನಮ್ಮ ಎರಡು ದಳಗಳು ಇಂದು ಮುಂಜಾನೆ ಕ್ರಾಂತಿಕಾರರನ್ನು ಕೂಡಿಕೊಂಡಿವೆ. ಈಗ ಒಂದು ತಾಸಿನ ಹಿಂದೆ ನಾನು ಜನರ ಮೇಲೆ ಗೋಳಿಬಾರು ಮಾಡಲು ರಕ್ಷಕ ದಳದವರಿಗೆ ಆಜ್ಞಾಪಿಸಲು ಅವರು ನಿರಾಕರಿಸಿದರು. ಮರಣದಂಡನೆಯ ಹೆದರಿಕೆ ಹಾಕಿದರೂ ನಿರುಪಯುಕ್ತವಾಯಿತು. ಅರಮನೆಯಲ್ಲಿಯ ಸೈನಿಕರೂ ಪಲಾಯನ ಹೇಳಿದ್ದಾರೆ. ನಾವೀಗ ಏಕಾಕಿ........"

ನೆರೆಯ ಕೋಣೆಯಲ್ಲಿಯೆ ಬಾಂಬಿನ ಭಯಂಕರ ಸ್ಫೋಟವಾಗಿ ಹೊಗೆ ದೂಳುಗಳಿಂದ ಇವರಿದ್ದ ಕೋಣೆಯು ಮುಸುಕಿಹೋಯಿತು. ಸಿಡಿದು ಬಂದ ಕಾಜಿನ ಚೂರುಗಳು ಸಾಮ್ರಾಟನ ಹಣೆಯನ್ನು ಗಾಯಗೊಳಿಸಿದವು. ನೆತ್ತರು ಹರಿದು ಅವನ ದೃಷ್ಟಿ ಮಂದವಾಯಿತು. ಹಾಗೇ ಅವನು ಬಾಗಿಲ ಕಡೆಗೆ ಧಾವಿಸಿದ.

" ಈ ಪುಂಡರನ್ನು ನಿಗ್ರಹಿಸುವವರು ಯಾರು ಇಲ್ಲವೆ ? " ಎಂದು ಆರಚಿದ ಮರುಕ್ಷಣದಲ್ಲಿಯೇ ಸಾಮ್ರಾಟನು ಆನಂದ ತುಂದಿಲನಾದ. ಆರ್ನಾಲ್ಡನು ಕೆಲವು ಸೈನಿಕರೊಡನೆ ಪ್ರವೇಶಿಸಿದ್ದ.

" ಆರ್ನಾಲ್ಡ. ಬಂದೆಯಾ. ಕಲ್ಯಾಣವಾಗಲಿ. "

" ಹೌದು, ನಾನು ಬಂದಿದ್ದೇನೆ " ಎಂದು ಬಿಚ್ಚುಗತ್ತಿಯನ್ನು ಹಿಡಿದುಕೊಂಡೇ ಅವನೆದುರಿಗೆ ನಿಂತ.

" ಈ ಜನರ ಗುರುತು ಹತ್ತಿತೆ ನಿನಗೆ, ಸಾಮ್ರಾಟಾ ? ಬಹುಶಃ ಹತ್ತಿರಲಿಕ್ಕಿಲ್ಲ. ಕಣ್ಣು ಕಿಸಿದು ನೋಡು, ನಿಮ್ಮ ತಂದೆ ಮತ್ತು ಪರ್ನರನ ಪ್ರಯತ್ನದಿಂದ ಈ ಭೂಮಿಗಿಳಿದು ಬಂದ ಪ್ರಯೋಗಜಾತರಿವರು ಏನು ನೆನಪಾಯಿತೆ ? "

" ಯಾರಲ್ಲಿ ! ಈ ಹುಚ್ಚನನ್ನು ಕೂಡಲೇ ಬಂಧಿಸಿರಿ " ಎಂದು ಸಾಮ್ರಾಟನು ಕೂಗಿದ.

" ಆ ಜನರನ್ನು ಬಂಧಿಸಿ ಒಯ್ಯಿರಿ. ಅವರೊಡನೇನೂ ಜಗಳವಿಲ್ಲ " ಎಂದು ಆರ್ನಾಲ್ಡನು ಅಲ್ಲಿದ್ದ ಸಾಮ್ರಾಟನ ಅಧಿಕಾರಿಗಳನ್ನು ಬಂಧಿಸಲು ತನ್ನ ಜನರಿಗೆ ಆಜ್ಞೆಯಿತ್ತ. ಇವನ ಬಾಯಿಂದ ಆಜ್ಞೆ ಹೊರಬೀಳುವದೊಂದೇ ತಡ, ಆ ಬ್ರಿಟಕೊಫ್ಪ ಮುಂತಾದ ಅಧಿಕಾರಿಗಳೆಲ್ಲ ಬಂಧಿತರಾಗಿದ್ದರು. ಮುಂದೆ ಒಂದು ನಿಮಿಷದಲ್ಲಿ ಸಾಮ್ರಾಟ ಮತ್ತೂ ಆರ್ನಾಲ್ಡ ಇಬ್ಬರೆ ಕೋಣೆಯಲ್ಲಿ ಉಳಿದರು.

" ನಿಮ್ಮ ಗೆಳೆಯರು ತೆರಳಿದರು. ಇನ್ನು ನಾವು ನಮ್ಮ ನ್ಯಾಯ ಬಗೆಹರಿಸಿಕೊಳ್ಳೋಣ " ಎಂದ ಆರ್ನಾಲ್ಡ.

" ನಿನ್ನ ಮಾತೇ ತಿಳಿಯುವದಿಲ್ಲ. ನನ್ನ ಮಗನಿಗಿಂತ ಹೆಚ್ಚಿನ ಪ್ರೀತಿಯಿಂದ ನಿನ್ನನ್ನು ನಡೆಸಿಕೊಂಡಿದ್ದೇನೆ. ಎಲ್ಲರೂ ಕೈಬಿಟ್ಟಾಗ ನೀನೂ ಮುನಿದೆದ್ದಿರುವದೇಕೆ " " ಎಂದು ಸಾಮ್ರಾಟನು ಕುರ್ಚಿಯಲ್ಲಿ ಕುಸಿದ

" ನಿನಗೆ ಉತ್ತರ ಬೇಕಾಗಿದ್ದರೆ ಈ ಜನರನ್ನು ನೋಡು, ನನ್ನನ್ನು ದೃಷ್ಟಿಸು. ಆತ್ಮಹೀನರಾದ ನಿನ್ನ ಗುಲಾಮರಾಗಿರಬೇಕಲ್ಲವೆ ಇವರು.

ನಿನ್ನ ಉದ್ದೇಶ ಕಲ್ಪನೆ ಮೀರಿ ಸಿದ್ಧಿಸಿದೆ. ಅರಮನೆಯನ್ನು ಪ್ರವೇಶಿಸು ತ್ತಿರುವ ಈ ಜನರ ಕೂಗು ನಿನಗೆ ಕೇಳಿಸುವದಿಲ್ಲವೆ ? ಅವರು ನಿನ್ನನ್ನಿಲ್ಲಿ ಕಂಡರೆ ನಿನ್ನ ಗತಿಯೇನಾಗಬಹುದು ? ನಾನೇ ಅವರನ್ನು ಕುಣಿಕೆ ಬಿಚ್ಚಿ ಬಿಟ್ಟಿದ್ದೇನೆ. "

" ಅರ್ನಾಲ್ಡ ನನ್ನನ್ನು ಉಳಿಸು. ದಯವಿಟ್ಟು ಹೇಗಾದರೂ ಕಾಪಾಡ ವರ್ನರನ ಪ್ರಯೋಗಗಳಲ್ಲಿ ನನ್ನ ಸಂಬಂಧವಿರಲಿಲ್ಲ. ಬೇಕಾದರೆ ಆಣೆ ಯಿಟ್ಟು ಹೇಳುತ್ತೇನೆ. ದಯವಿಟ್ಟು ಕಾಪಾಡು. " ಎಂದು ಇನ್ನಷ್ಟು ಕುರ್ಚಿ ಯಲ್ಲಿಯೆ ಹುದುಗಿಕೊಂಡ. ಇವನಿಗಿನ್ನು ಹೇಗೆ ಮನವರಿಕೆ ಮಾಡಿಕೊಡ ಬೇಕು ಎಂಬ ಪ್ರಯತ್ನ ನಡೆಸಿದ. ಕಳೆದ ಮಹಾಯುದ್ಧದಲ್ಲಿ ಫ್ರಾನ್ಸದ ಚರ್ಚೊಂದರಲ್ಲಿಂದ ಅಪಹರಿಸಿ ತಂದಿದ್ದ ಹಸ್ತಿದಂತಹ ಕ್ರಾಸು ಅಲ್ಲಿ ನೇತಾ ಡುತ್ತಿತ್ತು. ಸಾಮ್ರಾಟನು ಒಮ್ಮೆಲೆ ಅದನ್ನು ಎತ್ತಿಕೊಂಡು

" ಈ ಪವಿತ್ರ ಕ್ರಾಸಿನ ಆಣೆಯಿಟ್ಟು ಹೇಳುತ್ತೇನೆ. ನನಗೆ ಇದರ ಯಾವ ಸಂಬಂಧವೂ ಇಲ್ಲ " ಎಂದ

" ನಿಮ್ಮ ಕ್ರಾಸು, ನಿಮ್ಮ ದೇವರು. ನಮಗೇನು ಪ್ರಯೋಜನ. ನಿಮ್ಮ ಆಜ್ಞೆಯಿಂದಲೆ ನಾವು ಇವರನ್ನು ಅರಿತಿಲ್ಲ. ವರ್ನರನೊಡನೆ ಮಾಡಿಕೊಂಡ ಕರಾರುಗಳನ್ನು ನೀನು ಮರೆತು ಬಿಟ್ಟೆಯಾ ? ವಂಚಕಾ, ಕುಟಿಲಾ "

" ಅವನನ್ನು ತೀರಿಸಿ ಬಿಡೋಣ. ಇಷ್ಟು ಹೊತ್ತು ವ್ಯರ್ಥ ಕಳೆ ದಂತಾಯಿತು." ಎಂದು ಸುತ್ತಲೂ ನಿಂತಿದ್ದ ಪ್ರಯೋಗಜಾತರು ನುಡಿದರು.

" ಅವರಿಂದ ನನ್ನನ್ನು ಉಳಿಸು ಅರ್ನಾಲ್ಡ " ಎಂದು ಸಾಮ್ರಾಟನು ಮೊಣಕಾಲೂರಿ ಪ್ರಾರ್ಥಿಸಿದ. ಇಬ್ಬರು ಬಂದು ಅವನನ್ನು ನೆಲಕ್ಕೆ ಕೆಡ ಹಿದರು.

" ಅವನನ್ನು ಬಂಧಿಸಿ ಮಂಚದ ಮೇಲಿಡಿರಿ " ಎಂದು ಅರ್ನಾಲ್ಡ ಆ ಸೈನಿಕರು ತಮ್ಮ ನಡುಪಟ್ಟಿಗಳಿಂದ ಸಾಮ್ರಾಟನನ್ನು ಬಂಧಿಸಿ ಮಂಚದ ಮೇಲಿಟ್ಟರು.

ಆಗ ಹಠಾತ್ತಾಗಿ ಒಬ್ಬ ನಾಗಿಣಿಯು ಕಾಣಿಸಿಕೊಂಡಳು.

"ಅವನನ್ನು ನನಗೆ ಬಿಟ್ಟು ಕೊಡಿರಿ. ಅದು ನನ್ನ ಅಧಿಕಾರ" ಎಂದು ಗರ್ಜಿಸಿದಳು.

"ಇಲ್ಲಿ ನಿನಗೇನು ಬೇಕು. ಇದು ನಮ್ಮ ಕೆಲಸ. ಯಾರೂ ನಡುವೆ ಕೈ ಹಾಕಲಾರರು"

ಅವಳು ಅಟ್ಟಹಾಸದ ನಗು ಬೀರಿದಳು.

"ಸೇಡು ತೀರಿಸಿಕೊಳ್ಳುವ ಹಕ್ಕು ನಿನಗಿಂತ ಮೊದಲು ನನಗೆ ಪ್ರಾಪ್ತವಾಗಿದೆ. ನಿನ್ನ ರಥವನ್ನು ಈ ಭೂಮಿಗೆ ತರುವದಕ್ಕಾಗಿ ನಾನು ನನ್ನ ಮಾನ ಮರ್ಯಾದೆ ಎಲ್ಲವನ್ನೂ ಬಲಿ ಕೊಟ್ಟಿದ್ದೇನೆ. ಈ ಜನರನ್ನು ಕಳಿಸು ನಾವೇ ಇವನನ್ನು ಬಗೆ ಹರಿಸಿಕೊಳ್ಳೋಣ."

"ಈ ಕೋಣೆಯನ್ನು ಬಿಟ್ಟು ಹೊರಡಿರಿ" ಎಂದು ಅವನು ತನ್ನ ಜನರಿಗೆ ಆಜ್ಞಾಪಿಸಿದ. ಅದೇಕೊ ಆ ಹೆಂಗಸಿನ ಮಾತಿನಲ್ಲಿ ಅವನಿಗೆ ಒಮ್ಮೆಲೆ ವಿಶ್ವಾಸವುಂಟಾಯಿತು. ಕೊಲೆ ಸುಲಿಗೆಗಳಲ್ಲಿ ಆಸಕ್ತಿಯಿದ್ದ ಆ ಜನರು ಮರುಮಾತಾಡದೆ ಹೋದರು.

ಕೂಡಲೆ ಆ ಹೆಂಗಸು ಸಾಮ್ರಾಟನು ಬಿದ್ದುಕೊಂಡಲ್ಲಿಗೆ ಬಂದು ಒಂದರೆ ನಿಮಿಷ ಅವನನ್ನು ನಿರುಕಿಸಿದಳು. ಸಾಮ್ರಾಟನು ಅವಳನ್ನು ಪಿಳಪಿಳನೆ ನೋಡುತ್ತಿದ್ದನಷ್ಟೆ. ಹೆದರಿಕೆಯಿಂದ ಅವನ ಬಾಯಿಂದ ಮಾತೇ ಹೊರಡಲಿಲ್ಲ. ಅವಳು ನಕ್ಕಳು.

"ಸೇಡು ತೀರಿಸಿಕೊಳ್ಳಲು ನನಗಿಂದು ಸಾಧ್ಯವಾಯಿತು ಹ್ಯಾನ್ಸ. ಆದರೂ ಅದರ ರುಚಿಯೇನೂ ಕಡಿಮೆಯಾಗಿಲ್ಲ" ಎಂದು ಅವಳು ಸ್ವರ್ಗದಲ್ಲಿದ್ದ ತನ್ನ ಗಂಡನನ್ನು ನೆನೆದು ಹೇಳಿದಳು. ಅಷ್ಟರಲ್ಲಿ ನೆರೆಯ ಕೋಣೆಯಲ್ಲಿಯ ಉರಿಯ ನಾಲಿಗೆ ಇಲ್ಲಿಯೂ ಕಿಟಕಿಯೊಳಗಿಂದ ಚಾಚಿತು.

"ಬೇಗ ಕೆಲಸ ಪೂರೈಸು. ಇಲ್ಲದಿದ್ದರೆ ಇಲ್ಲಿಯೆ ಉರಿಯಲ್ಲಿ ಬೆಂದು ಹೋಗಬೇಕಾದೀತು" ಎಂದ ಅರ್ನಾಲ್ಡ.

"ನನಗೇನು! ಬೇಕಾದರೆ ನೀನು ಓಡಿ ಹೋಗಿ ಪ್ರಾಣ ಉಳಿಸಿಕೊ. ಒಂದು ನಿಮಿಷ ನಿನ್ನ ಕಠಾರಿಯನ್ನು ತಾ. ನಂತರ ಬೇಕಾದರೆ ಹೊರಟು ಹೋಗು"

ಅರ್ನಾಲ್ಡನು ಯಂತ್ರದಂತೆ ಕಠಾರಿಯನ್ನು ಅವಳ ಕೈಗೆ ಒಪ್ಪಿಸಿದ. ಕೋಣೆಯಲ್ಲಿ ಸೆಕೆ ಹೆಚ್ಚುತ್ತಿತ್ತು. ಅಗ್ನಿಜ್ವಾಲೆಗಳು ಸಮೀಪಕ್ಕೆ ಹರಬತ್ತಿದವು. ಆ ಹೆಂಗಸು ಸಾಮ್ರಾಟನ ಮುಖದ ಮೇಲೆ ಉಗಳಿದಳು. ಹೆದರಿಕೊಂಡು ಅವನು ನಿಶ್ಚೇತನನಾಗಿದ್ದ.

" ಕುನ್ನಿ ! ಕುನ್ನಿಯಂತೇ ಸಾಯಬೇಕು " ಎಂದು ಅವಳು ನುಡಿದು ಕಠಾರಿಯನ್ನು ಅವನ ಹೃದಯದಲ್ಲಿ ತಿವಿತಿವಿದು ಚುಚ್ಚಿದಳು. ನೆತ್ತರು ಕಾರಂಜಿಯಂತೆ ಪುಟಿಯಿತು. ಅವಳು ಸಮಾಧಾನದ ನಗುಬೀರಿ ಹೊರಟು ಹೋದಳು.

* * * *

ಅರಮನೆಯಿಂದ ಹೊರಬಿದ್ದ ಅರ್ನಾಲ್ಡನಿಗೆ ತಾನೇನು ನರಕದಲ್ಲಿ ಕಾಲಿಡುತ್ತಿದ್ದೇನೊ ಎನಿಸಿತು. ಬೀದಿಗಳಲ್ಲೆಲ್ಲ ಜನರು ಪರಸ್ಪರನ್ನು ಇರಿಯುವದರಲ್ಲಿ ತೊಡಗಿದ್ದರು. ಹೆಜ್ಜೆಗೊಂದರಂತೆ ಹೆಣಗಳು ಬೀಳುತ್ತಿದ್ದು ನೆತ್ತರಿನ ಕಾಲುವೆ ಹರಿದು ಬೀದಿಗಳೆಲ್ಲ ಕೆಂಪಾಗಿ ಹೋಗಿದ್ದವು ಭುಗಿ ಭುಗಿಲೆಂದು ಉರಿಯುತ್ತಿದ್ದ ಅರಮನೆಯ ಜ್ವಾಲೆಗಳು ನೆತ್ತರಿನ ಕೆಸರಿನಲ್ಲಿ ಪ್ರತಿಬಿಂಬಿತವಾಗಿ ಇನ್ನಷ್ಟು ರೌದ್ರಭೀಕರವಾಗಿದ್ದವು.

ಅರಮನೆಯನ್ನು ಮುತ್ತಿದ್ದ ಜನರು ಒಳಗಿನ ಅಮೂಲ್ಯ ವಸ್ತುಗಳನ್ನೆಲ್ಲ ಒಂದೊಂದಾಗಿ ಅಂಗಳಕ್ಕೆ ಎಸೆಯುತ್ತಿದ್ದರು, ಸಾಮ್ರಾಟನ ಹೆಸರುಗೊಂಡು ಕೂಗುತ್ತ ಕಂಡಲ್ಲಿ ಅವನನ್ನು ಕೊಂದು ಬಿಡುವೆವೆಂದು ಅರಚುತ್ತಿದ್ದರು. ಅಷ್ಟರಲ್ಲಿ ಅರಮನೆಯ ಕಿಟಕಿಯೊಂದರಲ್ಲಿ ಇಬ್ಬರು ಕಾಣಿಸಿಕೊಂಡು ಒಂದು ನಿಶ್ಚೇತನ ವ್ಯಕ್ತಿಯನ್ನು ಕಿಟಕಿಯೊಳಗಿಂದ ಕೆಳಗೆಸೆದರು. ಅಷ್ಟರಲ್ಲಿ ಒಬ್ಬನು ಆ ಜನ ಸಂದಣೆಯಲ್ಲಿ ನುಗ್ಗಿ " ಸಾಮ್ರಾಟನು ಸತ್ತ ! ರಾಜಕುಮಾರ ಈಟೆಲನಿಗೆ ಜಯವಾಗಲಿ "ಎಂದು ಘೋಷಿಸಿದ.

ಶಾಂತಿ ! ಶಾಂತಿ !! ಎಂದು ಜನಸಂದಣಿಯಲ್ಲಿ ಕಿರಚಿತು.

ಅರ್ನಾಲ್ಡನು ರೋಜೆಂಬರ್ಗನ ರಾಣಿಯ ಮನೆಯ ದಾರಿಹಿಡಿದ. ಮಾರ್ಗದಲ್ಲೆಲ್ಲ ವರ್ನರರ ಪ್ರಯೋಗಜಾತರೇ ತುಂಬಿದ್ದು, ಸ್ವೇಚ್ಛೆಯಂತೆ

ಕೊಲೆಸುಲಿಗೆ ನಡೆಸಿದ್ದರು. ಮಗುವನ್ನು ಬಿಟ್ಟುಕೊಡಲಾರದ ತಾಯಿ ಯನ್ನು ತಿವಿಗತ್ತಿಯಿಂದ ಇರಿದು ಆ ಮಗುವನ್ನು ಸೀಳಿ ಅದರ ಕೊರಳೊಳಗಿನ ಚಿನ್ನದ ಪದಕವನ್ನು ಕಸಿದರು. ಚರ್ಚುಗಳ ಪ್ರವೇಶಕ್ಕೆ ಪ್ರತಿಬಂಧ ವನ್ನೊಡ್ಡಿದ ಪಾದ್ರಿಗಳನ್ನು ಗುಂಡಿಕ್ಕಿಕೊಂದು ಚರ್ಚುಗಳಲ್ಲಿಯ ಬೆಳ್ಳಿ ಪಾತ್ರೆಗಳನ್ನು ಈಡಾಡಿದರು.

ಎಲ್ಸಾ ! ಅವಳ ಗತಿಯೇನಾಗಿದೆಂಬುದನ್ನು ಅರಿತುಕೊಳ್ಳುವದಕ್ಕಾಗಿ ಅರ್ನಾಲ್ಡನು ರೋಜೆಂಬರ್ಗದ ರಾಣಿಯ ಮನೆಯ ದಾರಿ ಹಿಡಿದಿದ್ದ. ಅಡ್ಡ ಬಂದವರನೆಲ್ಲ ಖಡ್ಗದಿಂದ ಸವರುತ್ತ ಆವೇಶದಿಂದ ಸಾಗಿದ್ದ. ಆ ಮನೆ ಯನ್ನು ಮುಟ್ಟುವಷ್ಟರಲ್ಲಿಯೆ ಒಬ್ಬ ದೂತನು ಧಾವಿಸಿ ಬಂದನು.

“ ಅವರು ಎಲ್ಸಾಳನ್ನು ಕೊಲ್ಲುತ್ತಿದ್ದಾರೆ ಕ್ಯಾಪ್ಟನ ! ಹ್ಯಾನ್ಸ ಮತ್ತು ಫ್ರೀಜರು ಅವರನ್ನು ತಡೆಯಲೆತ್ನಿಸಿ ಮಡಿದು ಹೋದರು ” ಎಂದುಸುರಿದ.

ರೋಜೆಂಬರ್ಗದ ರಾಣಿಯ ಮನೆಯ ಅಟ್ಟದ ಮೇಲೆ ಇಬ್ಬರು ಸೈನಿಕ ರಿದ್ದರು. ಅವರಲ್ಲೊಬ್ಬನು ಅರ್ನಾಲ್ಡನನ್ನು ಗುರುತಿಸಿ!

“ ಕ್ಯಾಪ್ಟನ, ನೋಡಿಲ್ಲಿ ಸುಲಿಗೆಯ ಸವಿತುತ್ತು !! ” ಎಂದು ಎಲ್ಸಾ ಳನ್ನು ತೋರಿಸಿದ.

“ ಅವಳನ್ನು ನನಗೆ ಒಪ್ಪಿಸು. ಸುಲಿಗೆಯಲ್ಲಿ ನನಗೂ ಪಾಲು ಬೇಕು ” ಎಂದು ಅರ್ನಾಲ್ಡನು ಅವರನ್ನು ತಡೆದ.

“ ನೀನೇ ಹೋಗಿ ಬೇಕಾದರೆ ಇನ್ನೊಂದು ಹೆಣ್ಣನ್ನು ಹುಡುಕಿ ಕೊಳ್ಳು. ನಾನಿವಳನ್ನು ಏಕೆ ಬಿಟ್ಟುಕೊಡಬೇಕೊ ತಿಳಿಯಲಾರದು. ಏ, ಇಲ್ಲಿ ನೋಡಿರಿ. ನಮ್ಮ ಸುಲಿಗೆಯ ಸವಿತುತ್ತು ಇವನಿಗೆ ಬೇಕಂತೆ ” ಎಂದು ಆ ಸೈನಿಕನು ತನ್ನ ಸಂಗಡಿಗರಿಗೆ ಹೇಳಿದ.

“ ಕ್ಯಾಪ್ಟನನು ತಾನೇ ಹೋಗಿ ಹುಡುಕಿಕೊಳ್ಳಲಿ ” ಎಂದು ಎಲ್ಲರೂ ಅರಚಿದರು.

ಇನ್ನು ಎಲ್ಸಾಳನ್ನು ಹಿಡಿದುಕೊಂಡ ಸೈನಿಕನಿಗೆ ಗುಂಡಿಕ್ಕಿದರೆ ಅವ ಳಿಗೇ ತಾಗುವ ಸಂಭವ. ಅರ್ನಾಲ್ಡನು ಕಂಗೆಟ್ಟು ನಿಂತ. ಸುತ್ತಲೂ

ಒಮ್ಮೆ ನೋಡಿದ. ಆದರೆ ದೈವವು ಅವನಿಗೆ ಅನುಕೂಲವಾಗಿತ್ತು. ನಗರದ ಮೇಲೆ ಹಾರಾಡುತ್ತಿದ್ದ ವಿಮಾನಗಳು ಸುರಿದ ಬಾಂಬೊಂದು ಈ ಮನೆಯ ಮೇಲೆ ಬಿದ್ದು ಸೈನಿಕರು ಇದ್ದ ಅಟ್ಟವು ನೆಲಸಮವಾಯಿತು. ಸೈನಿಕರೆಲ್ಲ ಕಲ್ಲುಮಣ್ಣುಗಳಲ್ಲಿ ಹೂತುಹೋಗಿದ್ದರು. ಎಲ್ಸಾಳ ದೇಹದ ಮೇಲೆ ಆ ಸೈನಿಕನ ಕಳೇಬರವಿದ್ದದ್ದರಿಂದ ಅರ್ನಾಲ್ಡನಿಗೆ ಆಶೆಹುಟ್ಟಿತು. ಮಹತ್ಪ್ರಯಾಸದಿಂದ ಅವನು ಅಲ್ಲಿಗೆ ಹೋಗಿ ಕಲ್ಲುಗಳನ್ನು ಸರಿಸಿ ಅವಳನ್ನು ಹೊರಗೆ ಎಳೆದನು. ಕಳೇಬರದಂತೆ ಅವಳ ಮುಖ ನಿಸ್ತೇಜವಾಗಿತ್ತು. ಹೃದಯವನ್ನು ಮುಟ್ಟಿ ನೋಡಿದ. ಬಡಿತ ನಿಂತುಹೋಗಿತ್ತು. ಅವಳ ಕಳೇಬರವನ್ನು ಎತ್ತಿ ಹೆಗಲ ಮೇಲೆ ಹಾಕಿಕೊಂಡ.

"ದುಷ್ಟ ದೇವರು, ಹಾಳಾಗಿ ಹೋಗಲಿ" ಎಂದು ಪುಟಪಟಿಸಿದ. ಅವನ ಹಣೆಗೂ ಗಾಯವಾಗಿತ್ತು. ನಿಂತು ವಿಕಟವಾಗಿ ನಕ್ಕ. ದೇವನೆಂಬುವ ನೇನಾದರೂ ಇದ್ದರೆ ಹೀಗೆ ಎಲ್ಸಾಳು ತನ್ನ ಹೆಗಲ ಮೇಲೆ ನಿತ್ರಾಣಳಾಗಿ ಬಿದ್ದುಕೊಂಡಿರುತ್ತಿದ್ದಳೆ? ಛಿ. ದೇವರೇ ಇಲ್ಲೆಂದು ಹುಟ್ಟಿದಂದಿನಿಂದ ಸಾಧಿಸಿದ ತಾನು ಈಗ ದೇವರನ್ನು ದೂಷಿಸಿ ಫಲವೇನು!

ಅವನು ರೋಜೆಂಬರ್ಗ್‌ನ ವಿಮಾನವನ್ನಿಟ್ಟಿದ್ದ ಮನೆಗೆ ಹೋಗಿ ವಿಮಾನವನ್ನು ಹೊರತೆಗೆದ. ಆ ಚಿಕ್ಕ ವಿಮಾನದ ಒಂದು ಆಸನದಲ್ಲಿ ಎಲ್ಸಾಳನ್ನು ಕುಳ್ಳಿರಿಸಿ ಇನ್ನೊಂದರಲ್ಲಿ ತಾನು ಕುಳಿತ. ಎಂಜಿನು ಪ್ರಾರಂಭಿಸಿ ವಿಮಾನವನ್ನು ಮೇಲಕ್ಕೇರಿಸಿದ. ಕೆಳಗೆ ಬರ್ಲಿನ ನಗರವು ನರಕದಂತೆ ಉರಿಯುತ್ತಿತ್ತು.

ಇನ್ನೇನು, ಅರ್ನಾಲ್ಡನು ನಗರವನ್ನು ದಾಟಿ ಪಾರಾಗುವನಿದ್ದ. ಆದರೆ ಕೆಳಗಿನಿಂದ ಗುಂಡಿನ ಸುರಿಮಳೆಯ ಶಬ್ದ ಕೇಳಿಸಿತು. ಹಣಿಕಿ ಹಾಕಿ ನೋಡಲು ಕೆಳಗಿನಿಂದ ತನ್ನ ವಿಮಾನಕ್ಕೆ ಗುರಿಯಿಟ್ಟು ಗುಂಡುಗಳನ್ನು ಹಾರಿಸುತ್ತಿದ್ದರೆಂದು ಕಂಡಕೂಡಲೆ ವಿಮಾನವನ್ನು ಇನ್ನಷ್ಟು ಮೇಲಕ್ಕೇರಿಸಿದ. ಆದರೆ ಅಷ್ಟರಲ್ಲಿಯೆ ಎಲ್ಲಿಂದಲೊ ಗುಂಡೊಂದು ಬಂದು ಅವನ ಬಲಭುಜವನ್ನು ಸೀಳಿ ಹೋಯಿತು. ಹಾ! ಸಿಕ್ಕುಬಿದ್ದೆ ಎಂದಂದುಕೊಂಡು ಎಡಗೈಯಿಂದ ವಿಮಾನದ ಗತಿಯನ್ನು ಪೂರ್ವಕ್ಕೆ ತಿರುಗಿಸಿದ. ತುಸು

ಹೊತ್ತಿನಲ್ಲಿಯೆ ಅವರು ನಗರವನ್ನು ದಾಟಿ ಬಂದಿದ್ದರು. ತಂಗಾಳಿಯು ತುಸು ಆಲ್ಹಾದವನ್ನಿತ್ತಿತು. ಮಗ್ಗಲಲ್ಲಿದ್ದ ಎಲ್ಸಾಳನ್ನು ಕಣ್ತುಂಬ ನೋಡಿದ ಆ ಬೆಳುದಿಂಗಳಲ್ಲಿ ನಿದ್ದೆ ಹೋದಂತಿದ್ದ ಅವಳ ಮುಖವು ಇನ್ನಷ್ಟು ಕಮನೀಯವಾಗಿತ್ತು.

"ಎಲ್ಸಾ ಕೊನೆಗೂ ನನ್ನವಳಾದೆ. ನಾನು ಹೇಳುತ್ತಿರಲಿಲ್ಲವೆ ನಿನಗೆ, ನೀನು ಎಂದೆಂದಿಗೂ ನನ್ನವಳೆಂದು. ಈಗ ಆಕಾಶದಲ್ಲಿ ಸುಖವಾಗಿ ತೇಲುತ್ತಿದ್ದೇವೆ. ಯಾರೂ ನಮ್ಮನ್ನು ವಿಂಗಡಿಸಲಾರರು. ದೇವರಿಗೆ ಕೂಡ ಸಾಧ್ಯವಿಲ್ಲ---" ಎಂದು ಆಡುತ್ತಿದ್ದಂತೆ ಡರ್‌ರ್‌ರ್ ಎಂಬ ಸಪ್ಪಳದಿಂದ ಕಿವಿಗಡಚಿಕ್ಕಿತು.

ಹಿಂದೆ ಬಾಗಿ ನೋಡಿದ. ವಿಮಾನದಲ್ಲಿಯ ಪೆಟ್ರೋಲ ತೀರಿತ್ತು. ಕಣ್ಣಿಗೆ ಕತ್ತಲು ಕವಿಯಿತು... ಸರ್‌ರ್‌ರ್.......

## ಮುಗಿದುದು.